೪ನೆಯ ಇಯತ್ತೆಯ ವಿದ್ಯಾರ್ಥಿಗಳ ಸಲುವಾಗಿ

ಸಚಿತ್ರ

# ವಿಜಾಪುರ ಜಿಲ್ಹೆಯ ವರ್ಣನೆಯು

ಮತ್ತು

# ಮುಂಬಯಿ ಕರ್ನಾಟಕದ ಸಾಮಾನ್ಯ ವರ್ಣನೆಯು




ಬರೆದವರು:

ಎಮ್. ಎಮ್. ನಂದಿಕೋಲಮಠ

ಮನಗೋಳಿ


ತಿದ್ದಿದ ೯ನೆಯ ಆವೃತ್ತಿ


ಪ್ರಕಾಶಕರು:

ಜಿ. ಎಚ್. ಚನ್ನಪ್ಪ

ಬುಕ್ ಸೇಲರ, ಬಾಗಲಕೋಟ

೧೯೪೩

ಬೆಲೆ: ೦-೮-೦

# ಮುನ್ನುಡಿ



ಎಂಟನೆಯ ಮುದ್ರಣದ ಪ್ರತಿಗಳು ತೀರಿ ಒಂಬತ್ತನೆಯ ಮು
ಅಣಿಯಾಗಿರುವುದೇ ಈ ಪುಸ್ತಕವು ಶಿಕ್ಷಣದಲ್ಲಿ ಎಷ್ಟು ಮೆಚ್ಚುಗೆಯಾ
ದೆಂಬುವುದಕ್ಕೆ ಉತ್ತಮವಾದ ಸಾಕ್ಷಿಯಾಗಿದೆ. ಅಲ್ಪಾವಧಿಯಲ್
ಕಡೆಗೆ ಹರಡಿ ಒಪ್ಪಿಗೆಯಾಗಿರುವ ಈ ಪುಸ್ತಕಕ್ಕೆ ಈಗ ಮುನ
ಅಗತ್ಯವೇ ಇರಲಿಲ್ಲ. ಆದರೂ ಈ ಪುಸ್ತಕದ ಪ್ರಕಾಶಕರಾದ ಶ್ರೀ
ಚನ್ನಪ್ಪನವರು ಕಂಡೊಡನೆಯೇ ಇದಕ್ಕೆ ತಕ್ಕ ಮುನ್ನುಡಿ ಬರೆಯ
ಬಗೆಯ ಇರುವನ್ನು ಕೋರಿದ್ದರಿಂದ ನಾನು ನಾಲ್ಕು ಮಾತುಗಳ ವ
ಯನ್ನು ಬರೆಯಬೇಕಾಯಿತು. ಆದರದ ಈ ಹೊತ್ತಿಗೆಗೆ ಮುನ್ನು
ಬರೆಯುವ ಸಂಧಿಯನ್ನು ಕೊಟ್ಟ ಬಗ್ಗೆ ಪ್ರಕಾಶಕರ ಉಪಕಾ
ಮನ್ನಿಸದಿರಲಾರೆನು.

ಇದರಲ್ಲಿಯ ವಿಷಯವು ಹೊಸ ಅಭ್ಯಾಸ ಪತ್ರಿಕೆಗನುಸರಿಸಿ ಸರಿಯಾಗಿ ಸಾಗಿದೆ. ವಿಷಯವಿವೇಚನೆಯು ಹೊಸ ಪದ್ಧತಿಗೆ ಹೊಂದಿಕೆಯಾಗಿದೆ. ಭೂಗೋಲ ವಿಷಯವು ನಿರಸವಿರದೆ ಸರಸವಾಗಿರುವುದೆಂಬುವುದೂ, ಕಠಿಣವಿರದೆ ಹಗುರಾಗಿರುವುದೆಂಬುವುದೂ ಈ ಪುಸ್ತಕದಿಂದ ಅರಿಯಬಹುದಾಗಿದೆ. ಅದರಂತೆಯೇ ಶಿಕ್ಷಕರಿಗೆ ಕಲಿಸಲಿಕ್ಕೆ, ಮಕ್ಕಳಿಗೆ ಹಗುರಾಗಿಯೂ ತೀವ್ರವಾಗಿಯೂ ಕಲಿಯಲಿಕ್ಕೆ ಇದು ಒಳ್ಳೇ ಸಹಾಯಕಾರಿಯಾಗಿರುವುದು. ಇದರಲ್ಲಿ ಜಿಲ್ಹೆಯ ಹಾಗು ಮುಂಬಯಿ ಕರ್ನಾಟಕದ ಸಾಗ್ರವಾದ ಸಂಗತಿಯು ಇರುವುದು. ಶಿಕ್ಷಣವು ಸೌಲಭ್ಯವಾಗಿ ಸಾಗುವಂತೆ ಇದರಲ್ಲಿ ಇರಲೇಬೇಕಾದ ಸಾಕಷ್ಟು ನಕಾಶೆಗಳೂ ಭಾವಚಿತ್ರಗಳೂ ಇರುತ್ತವೆ. ಮಕ್ಕಳಿಗೆ ಬೇಕಾದ ಎಲ್ಲ ಸಾಹಿತ್ಯಗಳಿಂದೊಡಗೂಡಿದ ನಕಾಶೆಗಳು ಮುದ್ದಾಗಿ ಇರುವವು. ಭಾವಚಿತ್ರಗಳು ನಿಚ್ಚಳವಾಗಿದ್ದು ಚಿತ್ತಾಕರ್ಷಕವಾಗಿರುವವು. ಪ್ರಾಕೃತಿಕ, ಔದ್ಯೋಗಿಕ, ರಾಜಕೀಯ ಮೊದಲಾದ ಸಂಗತಿಗಳು ಸವಿಸ್ತರವಾಗಿಯೂ ಸವಿಕಟ್ಟಾಗಿಯೂ ಬರ್ಣಿಸಲ್ಪಟ್ಟಿವೆ.

ಊರುಗಳಿಗೆ ಸಂಬಂಧಿಸಿದ ಐತಿಹಾಸಿಕ ಹಾಗೂ ಕಿವಿಯಿಂದ ಕಿವಿಗೆ ಸಾಗಿ ಬಂದ ವಿಷಯಗಳು ಸರಿಯಾಗಿ ಸಂಗ್ರಹಿಸಲ್ಪಟ್ಟಿವೆ. ಒಟ್ಟಿಗೆ ಎಲ್ಲ ಬಗೆಯಿಂದ ಈ ಪುಸ್ತಕವು ಮಕ್ಕಳ ಭೂಗೋಲ ಪಠ್ಯಪುಸ್ತಕಕ್ಕೆ ತಕ್ಕುದಾಗಿರುವುದು. ಈಗ ಈ ಪುಸ್ತಕಕ್ಕೆ ಸಿಕ್ಕುತ್ತಿರುವ ಉತ್ತಮವಾದ ನೆರವು ಮುಂದೂ ಹೆಚ್ಚಾಗಿ ಇದರ ಹೆಚ್ಚಳವು ಹೆಚ್ಚಾಗಲೆಂದು ಇಚ್ಛಿಸುವ.

ಬರೆಹಗಾರರ ಅಭಿಮಾನಿ,

ಬಾಗಲಕೋಟೆ
೧೨-೫-೧೯೪೩

**ಬಸವಾರ್ಯ ಬೂದೀಹಾಳಮಠ**
ರಿಟಾಯರ್ಡ ಅಸಿ. ಡೆ. ಎ. ಇನಸ್ಪೆಕ್ಟರ, ಧಾರವಾಡ.

೪. ಎರಡು ಗುಡ್ಡ ಅಥವಾ ಪರ್ವತಗಳ ನಡುವೆ ತಗ್ಗಾಗಿದ್ದ ಭೂಭಾಗಕ್ಕೆ ದರಿ ಅಥವಾ **ಕಂದರವೆಂತಲೂ, ಕೊಳ್ಳವೆಂತಲೂ** ಅನ್ನುವರು.

೫. ಭೂಮಿಯ ಮೇಲಿನ ನೀರು ಹರಿದುಹೋಗುವ ಸ್ಥಳಕ್ಕೆ ಹಳ್ಳವೆನ್ನುವರು. ಹಳ್ಳವು ದೊಡ್ಡದಿದ್ದರೆ **ಡೋಣಿಯು**. ಡೋಣಿಯಕ್ಕಿಂತ ದೊಡ್ಡದು ದೂರ ಪ್ರವಾಹವಿದ್ದರೆ **ನದಿ** ಅಥವಾ **ಹೊಳೆ** ಅನ್ನುವರು.

೬. ಹೊಳೆ, ಹಳ್ಳಗಳು ಹುಟ್ಟುವ ಸ್ಥಳಕ್ಕೆ **ಉಗಮ** ಅನ್ನುವರು. ಇವು ಸಮುದ್ರಕ್ಕೆ ಕೂಡುವ ಸ್ಥಳವು **ಮುಖವು**. ಎರಡು ಹೊಳೆಗಳು ಒಂದಕ್ಕೊಂದು ಕೂಡುವ ಸ್ಥಳಕ್ಕೆ **ಸಂಗಮ**ವೆನ್ನುವರು.

೭. ಹೊಳೆಗಳು ಕೂಡುವ ನೀರಿನ ದೊಡ್ಡಭಾಗಕ್ಕೆ **ಮಹಾಸಾಗರ**ವೆನ್ನುವರು. ಇಂಥ ನೀರಿನ ಭಾಗದ ಜಲಾಶಯದೊಳಗೆ ೫ ಭಾಗಗಳು ಕಲ್ಪಿಸಲ್ಪಟ್ಟಿವೆ. ಅವುಗಳ ಹೆಸರು:—

**೧ ಫ್ಯಾಸಿಫಿಕ್ ಮಹಾಸಾಗರ. ೨ ಅಟ್ಲಾಂಟಿಕ್ ಮಹಾಸಾಗರ. ೩ ಹಿಂದೀ ಮಹಾಸಾಗರ. ೪ ಉತ್ತರ ಮಹಾಸಾಗರ. ೫ ದಕ್ಷಿಣ ಮಹಾಸಾಗರ.**

೮. ನೆಲಕ್ಕೆ ಹೊಂದಿದಂಥ ಮಹಾಸಾಗರದ ಭಾಗಕ್ಕೆ **ಸಮುದ್ರ**ವೆನ್ನುವರು.

೯. ನೆಲದೊಳಗೆ ದೂರದ ವರೆಗೆ ಸೇರಿದಂಥ ಸಮುದ್ರದ ಭಾಗಕ್ಕೆ **ಆಖಾತ**ವೆನ್ನುವರು.

೧೦. ಎಲ್ಲ ದಿಕ್ಕುಗಳಲ್ಲಿ ನೆಲವು ಸುತ್ತಿಗಟ್ಟಿದಂಥ ನೀರಿನ ಭಾಗಕ್ಕೆ **ಸರೋವರ**ವೆನ್ನುವರು. ಸರೋವರವು ಸಣ್ಣದಿದ್ದರೆ **ಕೆರೆ** ಅನ್ನುವರು.

### ಮಾರ್ಗಗಳ ಭಾಗ

೧. ಚಕ್ಕಡಿ, ಮೋಟಾರುಗಳು ಅಡ್ಡಾಡುವ ಭಾಗಕ್ಕೆ **ಲೈನಮಾರ್ಗ**ವೆನ್ನುವರು.

೨. ಉಗಿಬಂಡಿಗಳು ಅಡ್ಡಾಡುವ ಕಬ್ಬಿಣ ಹಳಿ ಹಾಕಿದ ಭಾಗಕ್ಕೆ **ರೇಲ್ವೆಮಾರ್ಗ**ವೆನ್ನುವರು.

# ವಿಜಾಪುರ ಜಿಲ್ಹೆಯ ವರ್ಣನೆಯು

**ಮೇರೆಗಳು:**— ಉತ್ತರಕ್ಕೆ ಭೀಮಾ ನದಿಯು, ಅದರಾಚೆಯಲ್ಲಿ ಸೊಲ್ಲಾಪುರ ಜಿಲ್ಹೆ, ಅಕ್ಕಲಕೋಟ ಸಂಸ್ಥಾನ, ಮೊಗಲಾಯಿ ಇಲಾಖೆಯ ಭೂಮಿಯು. ಪೂರ್ವಕ್ಕೆ ಮೊಗಲಾಯಿ ಇಲಾಖೆ. ದಕ್ಷಿಣಕ್ಕೆ ಧಾರವಾಡ ಜಿಲ್ಹೆ, ಗಜೇಂದ್ರಗಡ ಸಂಸ್ಥಾನ, ಮೊಗಲಾಯಿ ಭೂಮಿಯು. ಪಶ್ಚಿಮಕ್ಕೆ ರಾಮದುರ್ಗ, ತೊರಗಲ್ಲು, ಮುಧೋಳ, ಜಮಖಂಡಿ, ಜತ್ತ, ಸಾಂಗಲಿ ಸಂಸ್ಥಾನಗಳೂ, ಬೆಳಗಾಂವಿ ಜಿಲ್ಹೆಯೂ ಉಂಟು.

**ಆಕಾರ:**— ಈ ಜಿಲ್ಹೆಯ ದಕ್ಷಿಣೋತ್ತರದ ಉದ್ದಳತೆ ಅಜಮಾಸು ೧೧೫ ಮೈಲು, ಪೂರ್ವ ಪಶ್ಚಿಮ ಅಗಲಳತೆ ೭೦ ಮೈಲು, ಕ್ಷೇತ್ರಫಲ ಸುಮಾರು ೫,೬೬೪ ಚಚ್ಚೌಕ ಮೈಲು ಅದೆ. ೧ ಚೌರಸ ಮೈಲಿಗೆ ೧೬೦ ಕೂರಿಗೆ ಭೂಮಿ. ಆಜಮಾಸು ೯ ಲಕ್ಷ ಜನರು ಈ ಜಿಲ್ಹೆಯಲ್ಲಿ ವಾಸಿಸುತ್ತಾರೆ. ೧ ಚೌರಸ ಮೈಲಿಗೆ ೧೬೦ ಜನರು ಆದರು. ಈ ಜಿಲ್ಹೆಯಲ್ಲಿ ಒಟ್ಟಿಗೆ ೮ ಭಾಗ ಮಾಡಿ, ಅವುಗಳಿಗೆ ತಾಲೂಕುಗಳೆಂದು ಹೆಸರು ಇಟ್ಟಿರುವರು. (ನಕಾಶ ನೋಡಿರಿ.) ಅವು ಯಾವವೆಂದರೆ:—

(೧) ಇಂಡಿ. (೨) ಸಿಂದಗಿ. (೩) ವಿಜಾಪುರ. (೪) ಬಾಗೇವಾಡಿ. (೫) ಮುದ್ದೇಬಿಹಾಳ. (೬) ಬಾಗಲಕೋಟೆ. (೭) ಬದಾಮಿ. (೮) ಹುನಗುಂದ ಮತ್ತು ತಾಲೂಕ ಭಾಗವು ದೊಡ್ಡದಿದ್ದಲ್ಲಿ ಪೇಠಾ ಮಾಡುವರು. ಅದರಂತೆ ಬೀಳಗಿ ಪೇಠಾ ಇರುವದು. ಇಲ್ಲಿರುವ ಅಧಿಕಾರಿಗಳಿಗೆ ಮಹಾಲಕರಿ ಅನ್ನುವರು.

**ಪ್ರಾಕೃತಿಕ ಸ್ವರೂಪ:**— ಈ ಜಿಲ್ಹೆಯಲ್ಲಿ ಕೃಷ್ಣಾ ನದಿಯ ದಕ್ಷಿಣ ಭಾಗದಲ್ಲಿ ಹೆಚ್ಚು ಗುಡ್ಡಗಳಿವೆ. ಅವುಗಳಲ್ಲಿ ಬದಾಮಿ, ಬಾಗಲಕೋಟ ತಾಲೂಕುಗಳಲ್ಲಿ ಹೆಚ್ಚು. ಕೃಷ್ಣಾ ನದಿಯ ಉತ್ತರ ಭಾಗದಲ್ಲಿ ಗುಡ್ಡಗಳು ಕಡಿಮೆ. ಬಾಗೇವಾಡಿ ತಾಲೂಕಿನಲ್ಲಿ ಸ್ವಲ್ಪ ಅದೆ. ಉಳಿದ ಭಾಗವೆಲ್ಲ ಬೈಲುಭೂಮಿ, ತೆಗ್ಗುದಿನ್ನೆ ಬಹಳ. ಜಾಲಿ, ಬೇವಿನ, ಈಚಲ ಮರಗಳು ಹೆಚ್ಚು ಇರುವವು.

**ಗುಡ್ಡಗಳಿದ್ದ ಊರು** :—ಬೀಳಗಿ, ಕುಂದರಗಿ, ಶಿರೂರ, ಕಿರಸೂರ, ಹೆರಕಲ್ಲು, ಅಚನೂರು, ಸೀತಿಮನಿ, ಬದಾಮಿ, ಗುಳೇದಗುಡ್ಡ, ಕೆಂದೂರ, ಮುದಕವಿ, ಅನವಾಲ, ಹೆಬ್ಬಳ್ಳಿ, ಗೋವನಕೊಪ್ಪ, ಬೆಳಕೊಪ್ಪ, ಜೊಳಚ-ಗುಡ್ಡ, ಬೇಲೂರ, ಪಟ್ಟದಕಲ್ಲು, ನಂದಿಕೇಶ್ವರ, ಹುಲ್ಲಿಕೇರಿ, ಹುನಗುಂದ, ಗುಡೂರ, ಕೆಲೂರ, ಚಿಕ್ಕನಾಳ, ಮುರಡಿ, ಮುಚಖಂಡಿ. ಬಾಗೇವಾಡಿ ತಾಲೂಕಿನಲ್ಲಿ ಇಂಗಳೇಶ್ವರ ಗುಡ್ಡ. ಈ ಊರುಗಳ ಹತ್ತರ ಗುಡ್ಡಗಳುಂಟು.

**ಕೆರೆಗಳು** :— ಈ ಜಿಲ್ಹೆಯಲ್ಲಿ ಹೇಳತಕ್ಕಂಥ ದೊಡ್ಡ ಕೆರೆಗಳು ಇಲ್ಲ. ಆದರೆ ೧ ಮಮದಾಪುರ, ೨ ಕುಮುಟಗಿ, ೩ ಮುಚಖಂಡಿ, ೪ ಶಿರೂರ, ೫ ಗುಳೇದಗುಡ್ಡ, ೬ ಕೆಂದೂರ, ೭ ನೀಲಗುಂದ, ೮ ಬದಾಮಿ, ೯ ಕಟಗೇರಿ, ೧೦ ವಿಜಾಪುರ, ೧೧ ಆಲಮೇಲ, ೧೨ ಡೋಣೂರ, ೧೩ ಹಳ್ಳೂರ, ೧೪ ಭಗವತಿಗಳಲ್ಲಿ ಕೆರೆಗಳುಂಟು.



**ಮುಚಖಂಡಿಯ ಕೆರೆ** (ತಾ. ಬಾಗಲಕೋಟ).

**ಗುಡ್ಡಗಳ ಉಪಯೋಗ :**—ಗುಡ್ಡಗಳಲ್ಲಿ ಕಲ್ಲು, ಕಬ್ಬಿಣ ಧಾತುಗಳೂ, ಕಟ್ಟಿಗೆ, ಹುಲ್ಲು ದೊರೆಯುತ್ತವೆ. ಇಲ್ಲಿ ಎಷ್ಟೋ ತರದ ಔಷಧ ಸಾಮಾನುಗಳೂ, ವನಸ್ಪತಿಗಳೂ ಸಿಗುತ್ತವೆ. ಸೃಷ್ಟಿಸೌಂದರ್ಯವನ್ನು ನೋಡಲಿಕ್ಕೆ ಗುಡ್ಡ ಚಂದ. ಗುಡ್ಡಗಳು ಇದ್ದ ಸ್ಥಳದಲ್ಲಿ ಮಳೆಯು ಹೆಚ್ಚು ಯಾಕಂದರೆ ಗುಡ್ಡದ ಮೇಲಿನ ಹವೆಯು ತಂಪು. ಕಾರಣ ಗುಡ್ಡಗಳು ಮೋಡಗಳನ್ನು ತಮ್ಮ ಕಡೆಗೆ ಎಳೆದುಕೊಳ್ಳುವವು. ಗುಡ್ಡಗಳಲ್ಲಿ ಹುಲಿ, ಚಿರ್ಚ, ಸಿಂಹ, ಕಾಡಮಿಕಗಳು ಇರಲಿಕ್ಕೆ ಅನುಕೂಲವಾಗುವದು. ಅಂತು ಒಕ್ಕಲಿಗರ ದನಕರುಗಳಿಗೆ ಹುಲ್ಲು ಸಿಗುವದರಿಂದ ಗುಡ್ಡವು ಉಪಯುಕ್ತವಾಗಿದೆ.

**ಹೊಳೆಗಳು :**—ಈ ಜಿಲ್ಹೆಯಲ್ಲಿ ೧ **ಕೃಷ್ಣಾ,** ೨ **ಭೀಮಾ,** ೩ **ಘಟಪ್ರಭಾ,** ೪ **ಮಲಪ್ರಭಾ** ಎಂಬ ನಾಲ್ಕು ಹೊಳೆಗಳೂ, **ಡೋಣಿ** ಎಂಬ ಒಂದು ಉಪ್ಪುನೀರಿನ ದೊಡ್ಡ ಹಳ್ಳವೂ ಉಂಟು.

ಕೃಷ್ಣಾ:— ಈ ನದಿಯು ಸಾತಾರೆ ಜಿಲ್ಹೆಯಲ್ಲಿ ಸಂಹ್ಯಾದ್ರಿ ಪರ್ವತಾವಳಿಯಲ್ಲಿ ಮಹಾಬಳೇಶ್ವರ ಎಂಬ ಸ್ಥಳದಲ್ಲಿ ಉಗಮವಾಗಿ (ಹುಟ್ಟಿ) ಸಾತಾರೆ, ಬೆಳಗಾಂವಿ ಜಿಲ್ಹೆಗಳೊಳಗಿಂದ ಹರಿದು ವಿಜಾಪುರ ಜಿಲ್ಹೆಯನ್ನು ಸೇರಿದೆ. ಮುಂದೆ ಮೊಗಲಾಯಿ ಇಲಾಖೆಯೊಳಗೆ ಸೇರಿ, ಮಚ್ಛಲಿಪಟ್ಟಣದ ಹತ್ತರ ಸಮುದ್ರಕ್ಕೆ ಕೂಡುತ್ತದೆ. ಇದಕ್ಕೆ ಭೀಮಾ, ಮಲಪ್ರಭಾ ಮತ್ತು ಘಟಪ್ರಭಾ ನದಿಗಳೂ, ಡೋಣಿಹಳ್ಳವೂ ಕೂಡಿರುತ್ತವೆ. ಇವು ಕೂಡುವ ಸ್ಥಳಕ್ಕೆ ಸಂಗಮವೆನ್ನುವರು; ಸಮುದ್ರಕ್ಕೆ ಕೂಡುವ ಸ್ಥಳಕ್ಕೆ ಮುಖವೆನ್ನುವರು. ಇದು ಹಿಂದೂ ಜನರಿಗೆ ಪವಿತ್ರ ನದಿ ಎನಿಸಿದ್ದರಿಂದ ಇದಕ್ಕೆ ಕೆಲವು ಜನರು ಹಿರೆಹೊಳೆ ಎಂತಲೂ, ದಕ್ಷಿಣಗಂಗಾ ಎಂದೂ ಅನ್ನುವದುಂಟು. ಈ ನದಿಯು ವಿಜಾಪುರ, ಬಾಗೇವಾಡಿ, ಮುದ್ದೇಬಿಹಾಳ ತಾಲೂಕುಗಳ ದಕ್ಷಿಣ ಮೇರೆಯಾಗಿಯೂ, ಬಾಗಲಕೋಟ, ಹುನಗುಂದ ತಾಲೂಕುಗಳ ಉತ್ತರ ಮೇರೆಯಾಗಿಯೂ ಹರಿದಿರುತ್ತದೆ.

**ಇದರ ಥಡದಲ್ಲಿದ್ದ ಊರುಗಳು :**—ದೇವರಗೆಣ್ಣೂರ, ಜೈನಾಪುರ, ಹಿರೇಗುಳಬಾಳ, ಹೊಸೂರ, ಬೊಮ್ಮಣಗಿ, ಇಸಲಾಂಪುರ, ಕಟಗೂರು,

ಗಲಗಲಿ, ಬಾಡಗಿ, ಬೆಳ್ಳುಬ್ಬಿ, ಸೊನ್ನ, ಕೊರ್ತಿ, ಕೊಲ್ಹಾರ, ಬಳೂತಿ, ರೊಳ್ಳಿ, ಸಿದ್ದನಾಳ, ಚಿಮ್ಮಲಗಿ, ಮಸೂತಿ, ಸೀತಿಮನಿ, ಎಲಗೂರು, ನಾಯನೇಗಲಿ, ಮಂಕಣಿ, ಕಾಳಗಿ, ಸಂಗಮ, ಕುಂಚಗನೂರು, ರಕ್ಕಸಗಿ, ತಂಗಡಗಿ, ಧನ್ನೂರು, ಮರೋಳ ಈ ಊರುಗಳುಂಟು.

**ಘಟಪ್ರಭಾ**:—ಇದು ಸಂಹ್ಯಾದ್ರಿ ಪರ್ವತದಲ್ಲಿ ರಾಮಘಟ್ಟದ ಹತ್ತರ ಹುಟ್ಟಿ, ಬೆಳಗಾಂವಿ ಜಿಲ್ಹೆಯೊಳಗಿಂದ ಹರಿದು, ಈ ಜಿಲ್ಹೆಯಲ್ಲಿ ಬಾಗಲಕೋಟ ತಾಲೂಕಿನೊಳಗೆ ಹಾಯ್ದು, ಮೂರಮಟ್ಟಿ ಸಂಗಮದ ಹತ್ತರ ಕೃಷ್ಣಾ ನದಿಗೆ ಕೂಡಿದೆ. ಈ ಸಂಗಮಕ್ಕೆ ಮೂರಮಟ್ಟಿಸಂಗಮ ವೆಂದೂ, ಕೂಡಲಸಂಗಮವೆಂದೂ ಅನ್ನುವರು.

ಈ ನದಿಯು ಬೆಳಗಾಂವಿ ಜಿಲ್ಹೆಯೊಳಗೆ ಗೋಕಾಕ ಹತ್ತರ ಗುಡ್ಡದ ಮೇಲಿಂದ ಬೀಳುವ ಕಾರಣ ಇಲ್ಲಿ **ಗೋಕಾಕ ಫಾಲ್ಸ** ಅಥವಾ **ಗೋಕಾಕ ತಡಸಲ**ವೆಂದು ಪ್ರಸಿದ್ಧವದೆ. ಈ ನೀರಿನ ಸಹಾಯದಿಂದ ದೊಡ್ಡ ದೊಡ್ಡ ಗಿರಣಿಗಳು ನಡೆಯುತ್ತವೆ.

**ಇದರ ಥಡದಲ್ಲಿ ಇದ್ದ ಊರುಗಳು**:—ಕಲಾದಗಿ, ಕುಂದರಗಿ, ಮುರನಾಳ, ಬಾಗಲಕೋಟ, ಹೆರಕಲ್ಲು, ಬೆಣ್ಣೂರು, ಕಂದಗಲ್ಲು.

**ಮಲಪ್ರಭಾ**:—ಇದು ಸಂಹ್ಯಾದ್ರಿ ಪರ್ವತದೊಳಗೆ ಕುಳಕುಂಬಿ ಹತ್ತರ ಹುಟ್ಟಿ, ಬೆಳಗಾಂವಿ ಜಿಲ್ಹೆಯೊಳಗಿಂದ ಹರಿದು, ಈ ಜಿಲ್ಹೆಯೊಳಗೆ ಬದಾಮಿ, ಹುನಗುಂದ ತಾಲೂಕುಗಳಲ್ಲಿ ಹಾಯ್ದು, ಸಂಗಮದ ಹತ್ತರ ಕೃಷ್ಣಾ ನದಿಗೆ ಕೂಡುತ್ತದೆ. ಈ ಸಂಗಮಕ್ಕೆ ಕಪ್ಪಡಿಸಂಗಮವೆಂದೂ, ಹಿರೇಸಂಗಮವೆಂದೂ ಅನ್ನುವರು. ಈ ಊರಲ್ಲಿ ಶ್ರೀಬಸವೇಶ್ವರನು ಸಂಗಮೇಶ್ವರನಲ್ಲಿ ಐಕ್ಯವಾದುದರಿಂದ ಐಕ್ಯಸ್ಥಳವೆಂದು ಪ್ರಸಿದ್ಧವದೆ.

**ಇದರ ಥಡದಲ್ಲಿದ್ದ ಊರುಗಳು**:—ಗೋವನಕೊಪ್ಪ, ಹೆಬ್ಬಳ್ಳಿ, ಚೊಳಚಗುಡ್ಡ, ಖೇಡ, ಮಂಗಳೂರು, ನಂದಿಕೇಶ್ವರ, ಪಟ್ಟದಕಲ್ಲು, ಐಹೊಳ್ಳಿ, ಲಾಯದಗುಂದಿ, ಬೇಲೂರು, ಮುಳ್ಳೂರು, ಕಮತಗಿ, ಮಾಗಿ, ಗಂಜಿಹಾಳ, ಚಿತ್ತರಗಿ, ಬೆಳಗಲ್ಲು, ಇದ್ದಲಗಿ.

**ಭೀಮಾ :**— ಈ ನದಿಯು ಸಂಹ್ಯಾದ್ರಿ ಪರ್ವತಾವಳಿಯಲ್ಲಿ ಭೀಮಾ ಶಂಕರ ಎಂಬ ಕ್ಷೇತ್ರದಲ್ಲಿ ಹುಟ್ಟಿ, ಸಾತಾರಾ, ಪುಣೆ, ಸೊಲ್ಲಾಪುರ ಜಿಲ್ಲೆ ಗಳೊಳಗಿಂದ ಹರಿದು, ಈ ಜಿಲ್ಹೆಯಲ್ಲಿ ಇಂಡಿ, ಸಿಂದಗಿ ತಾಲೂಕುಗಳ ಉತ್ತರ ಮೇರೆಯಾಗಿ ಹರಿದು, ಮೊಗಲಾಯಿ ಇಲಾಖೆಯಲ್ಲಿ ಕೃಷ್ಣಾನದಿಗೆ ಕೂಡುತ್ತದೆ.

**ಇದರ ಧಡದಲ್ಲಿದ್ದ ಊರುಗಳು :**— ಉಮರಜಿ, ಧೂಳಖೇಡ, ಅಗರಖೇಡ, ಹಲಸಂಗಿ, ರೂಡಿಗಿ, ಕಡಣಿ, ದೇವಣಗಾಂವಿ, ಸಿರಸಂಗಿ, ಮಣ್ಣೂರು, ಭೂಯಾರ, ಖೇಡಗಿ, ಕುಮಸಿ, ದೇವನಹಳ್ಳಿ.

**ಡೋಣಿ :** — ಇದು ಈ ಜಿಲ್ಹೆಯಲ್ಲಿಯೇ ಹೊನವಾಡ ಹತ್ತರ ಹುಟ್ಟಿ ವಿಜಾಪುರ, ಬಾಗೇವಾಡಿ, ಸಿಂದಗಿ, ಮುದ್ದೇಬಿಹಾಳ ತಾಲೂಕುಗಳಲ್ಲಿ ಹರಿದು, ಮೊಗಲಾಯಿ ಇಲಾಖೆಯಲ್ಲಿ ಕೃಷ್ಣೆಗೆ ಕೂಡುತ್ತದೆ. ಇದರ ನೀರು ಉಪ್ಪು (ಸವಳು) ಇದ್ದು ಭೂಮಿಯನ್ನು ಫಲವತ್ತಾಗಿ ಮಾಡುವದು.

**ಇದರ ಧಡದಲ್ಲಿದ್ದ ಊರುಗಳು :**— ದಾಶ್ಯಾಳ, ಭೈರವಾಡಗಿ, ಕೊಂಡಗೂಳಿ, ಹಂಚಲಿ, ಸಾರವಾಡ, ಕೊನಶ್ಯಾಳ, ಎಂಭತನಾಳ, ಸಾತಿಹಾಳ, ಯಾಳವಾರ, ಚಬನೂರು, ಸಾಸನೂರ, ತಾಳಿಕೋಟಿ.

**ಕೆರೆಗಳ ಉಪಯೋಗ:** – ದೊಡ್ಡ ದೊಡ್ಡ ಕೆರೆಗಳು ಇದ್ದ ಸ್ಥಳ ದಲ್ಲಿ ಅವುಗಳ ನೀರಿನಿಂದ ತೋಟಪಟ್ಟಿಗಳನ್ನು ಮಾಡಿಕೊಂಡು ಎಲೆಬಳ್ಳಿ, ಕಾಯಿಪಲ್ಲೆ, ಭತ್ತದ ಗದ್ದೆಗಳನ್ನು ಮಾಡಿಕೊಂಡಿರುವರು. ಮಮದಾಪುರ, ಕೆಂದೂರಲ್ಲಿ ದೊಡ್ಡ ಕೆರೆಗಳಿಂದ ಭತ್ತವನ್ನು ಬೆಳೆಯುವರು. ಮತ್ತು ಅವು ಗಳಿಂದ ಕಾಲುವೆ ಮಾಡಿಕೊಂಡು ತೋಟಪಟ್ಟಿಗಳನ್ನು ಮಾಡಿಕೊಂಡಿದ್ದಾರೆ.

**ಹೊಳೆಗಳ ಉಪಯೋಗ:**-ಹೊಳೆಗಳು ತುಂಬಿ ಬಂದಾಗ್ಗೆ ಎಡಬಲ ಹೊಲಗಳಲ್ಲಿ ಹಾಯ್ದು ರೇವೆ (ಹೊಸ ಮಣ್ಣನ್ನು) ಯನ್ನು ಬಿಡುವದರಿಂದ ಭೂಮಿಯು ಫಲವತ್ತಾಗಿ ಬೆಳೆಯುವದು. ಸಣ್ಣ ಕಾಲುವೆ ಮಾಡಿಕೊಂಡು ತೋಟಗಳನ್ನು ಸಹ ಮಾಡಿಕೊಂಡಿರುವರು. ಕೆಲ ಜನರು ಮೀನ ಹಿಡಿದು ಹೊಟ್ಟೆ ಹೊರಕೊಳ್ಳುವರು. ಅಲ್ಲಿಯ ಜನರಿಗೂ ದನಕರುಗಳಿಗೂ ಬಹಳ ಸುಖವುಂಟು. ಯಾವಾಗಲೂ ಹಸಿ ಮೇವು ಸಿಗುವದು. ಕಾಯಿಪಲ್ಲೆ,

ಹಣ್ಣುಹಂಪಲ, ಮೆಕ್ಕೆಜೋಳ, ಅವರಿ, ಬದನೆ, ಕುಂಬಳಕಾಯಿಗಳನ್ನು ಬೆಳೆಯುವರು. ನದಿಯು ಇದ್ದ ಊರುಗಳ ಜಾತ್ರೆಗಳು ಚನ್ನಾಗಿ ದೊಡ್ಡ ಪ್ರಮಾಣದಿಂದ ಆಗುವವು. ಯಾಕಂದರೆ ಜನರಿಗೂ, ದನಕರುಗಳಿಗೂ ನೀರಿನ ಪೂರೈಕೆಯಾಗುವದು. ಹೊಳೆಸಾಲ ದನಗಳು ಪ್ರಸಿದ್ಧ ಮತ್ತು ಹೆಚ್ಚು ಕಿಮ್ಮತ್ತು ಬಾಳುವವು. ಡೋಣಿಸಾಲ ಬಹಳ ಬೆಳೆಯುವದರಿಂದ ಈ ಭಾಗದಲ್ಲಿ ಭೂಮಿ ಇದ್ದ ಶ್ರೀಮಂತರೇ ಹೆಚ್ಚು. ಒಕ್ಕಲತನವೇ ಇವರ ಉದ್ಯೋಗ.

**ಭೂಮಿಯು:**— ಈ ಜಿಲ್ಹೆಯೊಳಗೆ ಎರೆ, ಮಸಾರಿ, ಗರಸು ಎಂದು ಮೂರು ತರದ ಭೂಮಿ ಉಂಟು.

(೧) ಎರೆ ಅಂದರೆ ಕಪ್ಪುಭೂಮಿ. ಬೆಳೆಗಳಿಗೆ ಬೇಕಾದ ಸಾಹಿತ್ಯ ಉಳ್ಳದ್ದು. ಹಸಿಯನ್ನು ಬಹಳ ದಿನ ಹಿಡಿದಿಟ್ಟುಕೊಳ್ಳುವದು. ಬಹಳ ಬೆಳೆಯುಳ್ಳದ್ದು ಇರುವದು.

೧. **ಎರೆ ಭೂಮಿಯು:**—ಕೃಷ್ಣಾತೀರ, ಡೋಣಿ, ಭೀಮಾ, ಮಲಪ್ರಭಾ, ಘಟಪ್ರಭಾ ನದಿಗಳ ಎಡಬಲ ಅದೆ.

೨. **ಮಸಾರಿ:**—ಅಂದರೆ ಕೆಂಪು ಭೂಮಿಯು. ಇದರಲ್ಲಿ ಕಸುವು ಕಡಿಮೆ. ಉಸುಕಿನ ಅಂಶವು ಕೂಡಿರುವದರಿಂದ ಸ್ವಲ್ಪ ಮಳೆಗೆ ಹಸಿ ಆಗಿ ಕೂಡಲೇ ಆರುವದು. ಇದನ್ನು ಬಾಗಲಕೋಟ, ಬದಾಮಿ, ಹುನಗುಂದ ತಾಲೂಕುಗಳ ಗುಡ್ಡದ ಎಡಬಲದಲ್ಲಿ ಕಾಣಬಹುದು.

೩. **ಗರಸು:**— ಇದು ಹರಳು ಕಲ್ಲುಗಳಿಂದ ಕೂಡಿದ ಭೂಮಿಯು. ಇದರಲ್ಲಿ ಮಸಾರಿ ಭೂಮಿಯ ಗುಣವಿರುವದು. ಇದಕ್ಕೆ ಮರಡಿ ಭೂಮಿ ಎಂದೂ ಅನ್ನುವರು. ಇಂಥ ಭೂಮಿಗೆ ಜನರು ಒಡ್ಡು ಹಾಕಿ ಭೂಮಿಯನ್ನು ಫಲವತ್ತಾಗಿ ಬೆಳೆದುಕೊಳ್ಳುವರು. ಒಟ್ಟಿನ ಮೇಲೆ ಈ ಜಿಲ್ಹೆಯಲ್ಲಿ ನಾಲ್ಕು ಭಾಗ ಭೂಮಿಯಲ್ಲಿ, ೩ ಪಾಲು ಸಾಗುವಳಿ, ೧ ಪಾಲು ಗುಡ್ಡಗಾಡು ಉಂಟು. ಒಟ್ಟು ಎರೆ ಭೂಮಿ ಹೆಚ್ಚು. ಮಸಾರಿ, ಗರಸು ಭೂಮಿ ಕಡಿಮೆ.

**ಹವೆಯು:—** ಈ ಜಿಲ್ಹೆಯ ಹವೆಯು ಶೀತವೂ, ಒಣದೂ ಇರುವದು ಆದ್ದರಿಂದ ಜನರು ನಿರೋಗಿಗಳೂ, ಕಸುವುಳ್ಳವರೂ ಇರುವರು. ಆದರೆ ಬದಾಮಿ ತಾಲೂಕಿನಲ್ಲಿ ಹವೆಯು ಉಷ್ಣವಾದದ್ದು. ಗುಡ್ಡಗಳ ನೆರೆಭೂಮಿ ಬಹಳ ಗರಸು ಇದ್ದುದರಿಂದ, ಈ ತಾಲೂಕಿನಲ್ಲಿ ಹಳ್ಳಗಳ ನೆರೆಪ್ರದೇಶಗಳ ಹತ್ತರ ಮಳೆಗಾಲದಲ್ಲಿ ಮಲೇರಿಯಾ ರೋಗದ ತ್ರಾಸವಾಗುವದು. ಒಟ್ಟಿನ ಮೇಲೆ ಈ ಜಿಲ್ಹೆಯ ಹವೆಯು ಆರೋಗ್ಯಕರವಾದದ್ದು.

**ಮಳೆ:—** ಈ ಜಿಲ್ಹೆಯಲ್ಲಿ ಮಳೆಯು ಕಡಿಮೆ ಆಗುವದು. ಏಕಂದರೆ ಈ ಜಿಲ್ಹೆಗೆ ಸಮುದ್ರ ಸಮೀಪವಿಲ್ಲ. ದೊಡ್ಡ ಪರ್ವತಾವಳಿಗಳಿಲ್ಲ. ವಿಸ್ತಾರವಾದ ಬನಗಳಿಲ್ಲ. ಆದ್ದರಿಂದ ಮಳೆ ಕಡಿಮೆ. ಕಾರಣ ಈ ಜಿಲ್ಹೆಗೆ ಬರಗಾಲದ ಹಾವಳಿಯೇ ಹೆಚ್ಚು.*

**ಬೆಳೆಗಳು:—** ಇಲ್ಲಿ ಮುಂಗಾರಿ, ಹಿಂಗಾರಿ ಪೀಕು ತಕೊಳ್ಳುವರು. ಮುಂಗಾರಿ ಅಂದರೆ ಮುಂಗಾರಿಜೋಳ, ಶೆಜ್ಜಿ, ಹುರಳಿ, ಸೇಂಗಾ, ತೊಗರಿ, ಕಾರೆಳ್ಳು, ಗುರೆಳ್ಳು, ನೆಲ್ಲು, ಶ್ಯಾವಿ, ನವಣಿ ಮುಂತಾದವುಗಳು.

**ಹಿಂಗಾರಿ ಪೀಕು:—** ಬಿಳಿಜೋಳ, ಗೋದಿ, ಕಡಲೆ, ಹತ್ತಿ, ಅಗಸಿ ಕುಸುಬಿ ಇವು ಹಿಂಗಾರಿ ಬೆಳೆಗಳು.

**ಮುಂಗಾರಿ ಪೈರು:—** ಮಳೆ ಅನುಕೂಲವಾದರೆ ಎಲ್ಲ ಧಾನ್ಯಗಳು ಭೂಮಿಯಲ್ಲಿ ಬೆಳೆಯಬಹುದು. ಗೊಬ್ಬರದ ಭೂಮಿಯಲ್ಲಿ ಚನ್ನಾಗಿ ಬೆಳೆಯುವವು. ಈ ಪೈರು ಮಳೆಗಾಲ ಪೈರೆಂದು ಅನ್ನುವರು.

---

* ಸಮುದ್ರದ ಮೇಲಿನ ನೀರು ಉಗಿಯಾಗಿ ಮೋಡಗಳಾಗುವವು. ಅವು ಗಾಳಿಗಳ ಕಡೆಗೆ ಹೋಗಲು ಎತ್ತರವಾದ ಪರ್ವತಗಳ ಮೇಲಿನ ತಂಪು ಹವೆಯು ತಗಲಲು ಉಗಿಯು (ಮೋಡಗಳು) ಕರಗಿ ನೀರಾಗಿ ಮಳೆಯಾಗುವದು. ಆದರಂತೆ ಬನಗಳ ಮೇಲೆ ಹವೆಯು ತಂಪು ಇರುವದರಿಂದ ಅಲ್ಲಿ ಮಳೆ ಹೆಚ್ಚಾಗುವದು. ಮೋಡಗಳಿಗೆ ಅತಿಶಯವಾಗಿ ತಂಪು ತಗಲಿದರೆ ಕೂಡಲೆ ಮೋಡಗಳು ಕತ್ತರಿಸಿ, ಆಣೆಕಲ್ಲಿನ ರೂಪವಾಗಿ ಬೀಳುವದು. ಇದಕ್ಕೇನೆ ಬರ್ಫವೆನ್ನುವರು. ಮೋಡಗಳು ರಭಸದಿಂದ ಬೀಳುವಾಗ ಆಗುವ ಸಪ್ಪಳಕ್ಕೆ ಗುಡುಗು ಅನ್ನುವರು. ಇದನ್ನು ಶಿಕ್ಷಕರು ಬಾಲಕರಿಗೆ ತಿಳಿಯುವಂತೆ ತಿಳಿಸತಕ್ಕದ್ದು.

**ಹಿಂಗಾರಿ ಪೈರು :—**ಎರೆಭೂಮಿಯಲ್ಲಿಷ್ಟೇ ಬೆಳೆಯಬಹುದು. ಈ ಪೈರಿಗೆ ಚಳಿಯು ಚನ್ನಾಗಿ ಬೇಕಾದ ಕಾರಣ ಇದು ಚಳಿಗಾಲ ಪೈರೆಂದು ಅನ್ನುವರು. ಹತ್ತಿ, ಗೋದಿ ಪೈರು ಎಲ್ಲ ನದಿಗಳ ತೀರದಲ್ಲಿಯೂ, ಡೋಣಿಯ ಎಡಬಲ ಎರೆಭೂಮಿಯಲ್ಲಿಯೂ ಚನ್ನಾಗಿ ಬರುತ್ತವೆ.

ಬದಾಮಿ ತಾಲೂಕಿನಲ್ಲಿ, ಉಳಿದ ಮಸಾರಿಭೂಮಿಯಲ್ಲಿ ಮುಂಗಾರಿ ಬೆಳೆಯನ್ನು ಹೆಚ್ಚಾಗಿ ಬೆಳೆದುಕೊಳ್ಳುವರು. ಆದರೆ ಭೂಮಿಗೆ ನೀರಿನ ಅನುಕೂಲ ಇದ್ದಲ್ಲಿ ತೋಟಗಳನ್ನು ಮಾಡಿಕೊಂಡು ೧೨ ತಿಂಗಳು ಬಾಳೆ, ದಾಳಿಂಬ, ಲಿಂಬೀಹಣ್ಣುಗಳು, ಉರಳಿಗಡ್ಡಿ, ಮೆಣಸಿನಕಾಯಿ, ಬಳ್ಳೊಳ್ಳಿ, ಕಾಯಿಪಲ್ಲೆ, ಎಲಿ, ಕಬ್ಬು ಸ್ವಲ್ಪ ಮಟ್ಟಿಗೆ ಬೆಳೆದುಕೊಳ್ಳುವರು.

**ಖನಿಜಗಳು:—**ಗುಡೂರ, ಬದಾಮಿ ಗುಡ್ಡಗಳಲ್ಲಿ ಕಬ್ಬಿಣ ಕಲ್ಲುಗಳು ದೊರೆಯುತ್ತವೆ. ಆದರೆ ಇಲ್ಲಿ ಕಬ್ಬಿಣ ಮಾಡತಕ್ಕ ಕಾರಖಾನೆಗಳು ಇಲ್ಲದ್ದರಿಂದ ಕಬ್ಬಿಣವಾಗುವದಿಲ್ಲ. ಬೆಳವಲಕೊಪ್ಪದಲ್ಲಿ ಸಾಣೆಕಲ್ಲುಗಳೂ ಬದಾಮಿ, ಗುಳೇದಗುಡ್ಡ, ಮುದ್ದೇಬಿಹಾಳದಲ್ಲಿ ಇಮಾರತಿಯ ಬಿಳೇಕಲ್ಲು ಹಾಗೂ ಬೀಸುವ ಕಲ್ಲುಗಳೂ ದೊರೆಯುತ್ತವೆ. ಕಲಾದಗಿ, ಶಿಲ್ಲಿಕೇರಿ ಭೂಮಿಯಲ್ಲಿ ಪಾಟಿಕಲ್ಲುಗಳು ದೊರೆಯುತ್ತವೆ. ಈಗ ಲಕ್ಷ್ಮೀ ಸ್ಲೇಟ ಕಂಪನಿಯವರು ಯಂತ್ರಹಾಕಿ ಜರ್ಮನಿಯ ನಮೂನೆ ಪಾಟಿ ತಯಾರಿಸಿ, ಇಡೀ ಮುಂಬೈ ಇಲಾಖೆಯೊಳಗೆ ಪುರವಠೆ ಮಾಡುವರು. ಇವೇ ಕಲ್ಲಿನಿಂದ ದೊಡ್ಡ ಮೂರ್ತಿಗಳು ತಯಾರಾಗುವವು. ನಾದಿಗರ ಮಸಿಯುವ ಕಲ್ಲುಗಳೂ ಸಿಗುವವು. ಗದ್ದನಕೇರಿ ಹತ್ತರ ರಂಗವಲ್ಲೀಕಲ್ಲು ಸಿಗುವದು. ಕಲಾದಗಿ, ಬಾಗಲಕೋಟ ಹತ್ತರ ಸುಣ್ಣದ ಕಲ್ಲು ದೊರೆಯುತ್ತವೆ. ಬಾಗಲಕೋಟ, ಬದಾಮಿ ಹತ್ತರ ಹೌದಿನ ಕಲ್ಲು ಸಿಗುವವು. ಮತ್ತು ತಾಳಿಕೋಟಿಯಲ್ಲಿ, ಸಿಂದಗಿ ತಾಲೂಕ ಪೈಕಿ ಹೊನ್ನಹಳ್ಳಿಯಲ್ಲಿ ಸಂಗಮವರೀ ಕಲ್ಲುಗಳು ದೊರೆಯುತ್ತವೆ. ಗುಡೂರಲ್ಲಿ ಕಾಜು ಮಾಡತಕ್ಕ ಉಸುಬು ದೊರೆಯುತ್ತದೆ. ಅದ್ದರಿಂದ ಇಲ್ಲಿ ಕಾಜಿನ ಬಳೆ ತಯಾರಿಸುವರು.

**ಪ್ರಶ್ನೆಗಳು:—** ವಿಜಾಪೂರ ಜಿಲ್ಹೆಯ ಮೇರೆ ಹೇಳಿರಿ? ಜಿಲ್ಹೆಯಲ್ಲಿ ಎಷ್ಟು ತಾಲೂಕುಗಳು ಅವೆ? ಗುಡ್ಡಗಳು ಯಾವ ತಾಲೂಕಿನಲ್ಲಿವೆ? ಜಿಲ್ಹೆಯಲ್ಲಿ ದೊಡ್ಡ

# ವಿಜಾಪುರಜಿಲ್ಲೆ

(ಭೂಮಿ, ಪೈರು ಮತ್ತು ಕೋಟೆ)



ಭೀಮಾನದಿ

ಇಂಡಿ

ಸಿಂದಗಿ

ವಿಜಾಪುರ

ಬಾಗೇವಾಡಿ

ಮಮದಾಪುರ

ಮುದ್ದೆಬಿಹಾಳ

ಬಾಗಲಕೋಟೆ

ಬಾದಾಮಿ

ಹುನಗುಂದ

ಮೈಲಿನ ಸ್ಕೇಲು

Super.

ಕೆರೆ ಇದ್ದ ಊರುಗಳಾವವು? ಗುಡ್ಡಗಳ ಉಪಯೋಗವೇನು? ಈ ಜಿಲ್ಹೆಯಲ್ಲಿ ಎಷ್ಟು ನದಿಗಳಿವೆ? ಯಾವವು? ನದಿಗಳ ಉಪಯೋಗವೇನು? ಕೃಷ್ಣಾ ನದಿಯ ಬಗ್ಗೆ ಗೊತ್ತಿದ್ದ ಸಂಗತಿ ಹೇಳಿರಿ? ಜಿಲ್ಹೆಯಲ್ಲಿ ಯಾವ ಯಾವ ಭೂಮಿ ಅವೆ? ಎಲ್ಲಿ ಅವೆ? ಜಿಲ್ಹೆಯ ಹವೆ, ಮಳೆ ಹ್ಯಾಗೆ? ಬೆಳೆಗಳು ಯಾವವು? ಎಲ್ಲಿ ಹೆಚ್ಚಾಗಿ ಬೆಳೆಯುವವು? ಖನಿಜ ಪದಾರ್ಥಗಳು ಎಲ್ಲಿ ಹುಟ್ಟುತ್ತವೆ? ಕಾಜಿನ ಸಾಮಾನು ಎಲ್ಲಿ ತಯಾರಾಗುತ್ತವೆ?

---

## ಉದ್ಯೋಗಗಳು

ಇಲ್ಲಿ ಒಕ್ಕಲತನವೇ ದೊಡ್ಡ ಉದ್ಯೋಗವು. ಕೈಗಾರಿಕೆ ಉದ್ಯೋಗ ಕಡಿಮೆ. ನೌಕರಿ ತೀರ ಕಡಿಮೆ.

**ಕೈಗಾರಿಕೆ:—**ಮನಸ್ಸಿನ ಕುಶಲತೆಯಿಂದ ಮಾಡುವ ಉದ್ಯೋಗಕ್ಕೆ ಕೈಗಾರಿಕೆ ಅನ್ನುವರು. ಇದರಲ್ಲಿ ಬಡಿಗತನ, ನೇಕಾರಿಕೆ, ಕಂಚುಗಾರಿಕೆ, ಕಮ್ಮಾರ, ಬಳಿಗಾರ, ಕುಂಬಾರ, ಬಣಗಾರ ಮುಂತಾದವು ಬರುತ್ತವೆ. ಬದಾಮಿ, ಬಾಗಲಕೋಟ, ಹುನಗುಂದ ತಾಲೂಕಗಳಲ್ಲಿ ನೇಕಾರಿಕೆ ಬಹಳ. ಇಂಡಿ, ಬಾಗೆವಾಡಿಗಳಲ್ಲಿ ಸ್ವಲ್ಪ ಮಟ್ಟಿಗೆ ಮಾಡುವರು. ಇಲಕಲ್ಲ ಸೀರೆಗಳು, ಗುಳೇದಗುಡ್ಡ ಖಣಗಳು ಬಹು ಪ್ರಸಿದ್ಧ. ಬಾಗಲಕೋಟೆಯಲ್ಲಿ ತಕ್ಕ ಮಟ್ಟಿಗೆ ಸೀರೆ, ಕುಪ್ಪಸಗಳು ತಯಾರಾಗುವವು. ಬಾಗಲಕೋಟೆ, ಕಲಾದಗಿ, ವಿಜಾಪೂರದ ನೆರೆಯ ಗ್ರಾಮಗಳಲ್ಲಿ ಉತ್ತಮ ಕಂಬಳಿಗಳು ತಯಾರಾಗುವವು. ಕಲಾದಗಿ, ಕುಂದರಗಿ ಕಂಬಳಿಗಳು ಪ್ರಸಿದ್ಧವಾಗಿವೆ. ಗುಡೂರ, ಕಮತಗಿ, ಅಮೀನಗಡ, ಬಾಗಲಕೋಟೆಗಳಲ್ಲಿ ತಾಮ್ರ, ಹಿತ್ತಾಳಿ ಸಾಮಾನುಗಳು ತಯಾರಾಗುವವು. ಗುಡೂರ, ಗಲಗಲಿ, ಕಂದಗಲ್ಲ ಹತ್ತರ ಇರುವ ಇಲಾಳಲ್ಲಿಯೂ ಕಾಜಿನ ಬಳೆಗಳು ತಯಾರಾಗುವವು. ಕಲಾದಗಿ ಗಲಗಲಿ ನೆರೆಯ ಹಳ್ಳಿಗಳಲ್ಲಿ ಕಾಂಗ್ರೆಸ್ ಪ್ರಸಿದ್ಧವಾದ ಉತ್ತಮ ಖಾದಿ ಬಟ್ಟೆಗಳು ತಯಾರಾಗುವವು

**ವ್ಯಾಪಾರ:** ಸದರ ಕೈಗಾರಿಕೆಯ ಸಾಮಾನುಗಳಾಗಲೀ, ಮತ್ತು ತಮ್ಮಲ್ಲಿ ಹುಟ್ಟತಕ್ಕಂಥ ಕಾಳುಕಡಿ ಮಾಲು ಮಾರಾಟ ಮಾಡಿ, ತಮ್ಮ

ದೇಶದಲ್ಲಿಲ್ಲದ ಮಾಲು ತರಿಸಿ ಮಾರಾಟ ಮಾಡುವ ಉದ್ಯೋಗ(ಧಂದೆ) ಕ್ಕೆ ವ್ಯಾಪಾರವೆನ್ನುವರು. ಇವನ್ನು ಈ ಜಿಲ್ಹೆಯಲ್ಲಿ ತಕ್ಕಮಟ್ಟಿಗೆ ಜನರು ಮಾಡುವರು.

ಈ ಜಿಲ್ಹೆಯಲ್ಲಿ ಹುಟ್ಟುತಕ್ಕಂಥ ಗೋದಿ, ಹತ್ತಿ, ಎಣ್ಣೆಕಾಳು, ಕಿರಾಣಿ ಕಾಳು ಪರದೇಶಕ್ಕೆ ಮಾರಾಟಕ್ಕೆ ಹೋಗುವವು. ಹಣ್ಣುಹಂಪಲ, ಕಾಯ-ಪಲ್ಲೆ, ಮೆಣಸಿನಕಾಯಿ, ವಿಳ್ಯದ ಎಲೆಗಳು ಸಮೀಪದ ಜಿಲ್ಹೆಗಳಿಗೆ ಮಾತ್ರ ಮಾರಾಟಕ್ಕೆ ಹೋಗುವವು. ಇಲಕಲ್ಲ ಸೀರಿ, ಗುಳೇದಗುಡ್ಡ ಖಣ, ಕುಂದರಗಿ ಕಂಬಳಿಗಳು ಮಾರಾಟಕ್ಕೆ ಹೋಗುತ್ತವೆ. ಸಬಕಾರ ಮಾಡುವ ಕಾರಖಾನೆಗಳು ಈ ಜಿಲ್ಹೆಯಲ್ಲಿ ಕೆಲವು ಅವೆ. ಸ್ವಲ್ಪಮಟ್ಟಿಗೆ ಮಾರಲು ಮಾಲು ಸಿಗುತ್ತದೆ.

ಇನ್ನು ನಮ್ಮ ಜಿಲ್ಹೆಗೆ ಬೇಕಾಗುವ ಸಾಮಾನುಗಳೆಂದರೆ— ಅಕ್ಕಿ, ಉಪ್ಪು, ಸಕ್ಕರೆ, ಟೆಂಗಿನಕಾಯಿ, ಖೊಬ್ಬರಿಎಣ್ಣೆ, ಖೊಬ್ಬರಿ, ಅರಿವೆ, ದೀಪದಕಡ್ಡಿ, ಉಕ್ಕು, ಕಬ್ಬಿಣ, ಕಾಜು, ಕಾಗದ, ಕೊಡೆಗಳು, ಸುಗಂಧ ಪದಾರ್ಥಗಳು; ಔಷಧ ಸಾಮಾನುಗಳು, ಬೆಳ್ಳಿ, ಬಂಗಾರ, ತಾಮ್ರ, ಹಿತ್ತಾಳಿ, ಭಾಂಡೆ ಸಾಮಾನುಗಳು, ಪರರಾಷ್ಟ್ರಗಳಿಂದ ತರಿಸಿ ಮಾರಾಟ ಮಾಡುತ್ತಾರೆ.

ಪ್ರಶ್ನೆಗಳು:— ಉದ್ಯೋಗವೆಂದರೇನು? ಈ ಜಿಲ್ಹೆಯಲ್ಲಿ ಉದ್ಯೋಗ-ಗಳಾವವು? ಇಲಕಲ್ಲ, ಗುಳೇದಗುಡ್ಡ, ಬಾಗಲಕೋಟೆ, ಕಲಾದಗಿ, ಕುಂದರಗಿ, ತಾಳಿಕೋಟೆಗಳಲ್ಲಿ ಯಾವ ಯಾವ ಕಾರಖಾನೆಗಳಿವೆ? ಇಲ್ಲಿ ಹುಟ್ಟುವ ಸಾಮಾನುಗಳು ಯಾವವು? ಪ್ರಸಿದ್ಧ ಖಾದಿ ಎಲ್ಲಿ ಹುಟ್ಟುವದು? ವ್ಯಾಪಾರ ಅಂದರೇನು? ವ್ಯಾಪಾರ ಹೆಚ್ಚಾಗಲು ಕಾರಣವೇನು? ಈ ಜಿಲ್ಹೆಯಿಂದ ಪರಜಿಲ್ಹೆಗೆ ಹೋಗುವ ಸರಕುಗಳು ಯಾವವು?

---

## ಜನರು, ಭಾಷೆ

**ಜನರು:—** ಈ ಜಿಲ್ಹೆಯಲ್ಲಿ ಸುಮಾರು ೯ ಲಕ್ಷ ಜನರು ಇರುವರು. ಇವರು ಸಶಕ್ತರು, ಇರುವರು. ಜಿಲ್ಹೆಯಲ್ಲಿ ಮುಖ್ಯವಾಗಿ

ಹಿಂದು-ಮುಸಲ್ಮಾನ ಎಂಬ ಎರಡು ಧರ್ಮದ ಜನರು ಇರುವರು. ಹಿಂದುಗಳಲ್ಲಿ ವೀರಶೈವರು ( ಲಿಂಗಾಯತರು ) ಹೆಚ್ಚು. ಬ್ರಾಹ್ಮಣ, ಮರಾಠಾ, ಪಂಚಾಳ, ಜೈನರು, ಕುರುಬರು, ಒಡ್ಡರು, ಲಮಾಣಿ, ಹರಣ-ಶಿಕಾರಿ, ಕೊರವರು ಇರುವರು. ಒಟ್ಟಿನ ಮೇಲೆ ೧೦೦ಕ್ಕೆ ೧೦ ಪಾಲು ಮುಸಲ್ಮಾನರು ಇರುವರು. ಲಮಾಣಿಗಳು ಊರ ಹೊರಗೆ ಬೈಲಲ್ಲಿ ಜೋಪಡಿ ಹಾಕಿಕೊಂಡು ವಾಸ ಮಾಡುವರು.

**ಭಾಷೆ:**—ಇಲ್ಲಿ ಕನ್ನಡ ಭಾಷೆ ಹೆಚ್ಚು. ಎಲ್ಲ ಧರ್ಮದವರು ಆಡು-ವರು. ಇವಲ್ಲದೆ ಮರಾಠಿ ಭಾಷೆಯನ್ನು ಮರಾಟರು, ಮುಸಲ್ಮಾನಿ ಭಾಷೆಯನ್ನು ( ಉರ್ದು ) ಮುಸಲ್ಮಾನರು ಮಾತಾಡುವರು.

ಕೃಷ್ಣಾ ನದಿಯಿಂದ ಈ ಜಿಲ್ಹೆಯನ್ನು ಉತ್ತರ ಭಾಗ, ದಕ್ಷಿಣ ಭಾಗವೆಂದು ಎರಡು ಭಾಗ ಮಾಡಬಹುದು. ಅವುಗಳನ್ನು ಒಂದಕ್ಕೊಂದು ಹೋಲಿಸಿ ನೋಡುವಾ.




**ಸಾಮ್ಯ**

| **ಉತ್ತರ ಭಾಗದಲ್ಲಿ** | **ದಕ್ಷಿಣ ಭಾಗದಲ್ಲಿ** |
|---|---|
| ೧. ಡೋಣಿ, ಭೀಮಾ ಎಂಬ ಎರಡು ನದಿಗಳುಂಟು. | ೧. ಮಲಪ್ರಭಾ, ಘಟಪ್ರಭಾ ಎಂಬ ಎರಡು ನದಿಗಳುಂಟು. |
| ೨. ಎರಡೂ ನದಿಗಳ ತೀರದಲ್ಲಿ ಎರೆ ಭೂಮಿ ಉಂಟು. | ೨. ಎರಡೂ ನದಿಗಳ ತೀರದಲ್ಲಿ ಎರೆ ಭೂಮಿ ಉಂಟು. |
| ೩. ವ್ಯಾಪಾರದ ಮುಖ್ಯ ಸ್ಥಳ ವಿಜಾಪೂರ ಅದೆ. | ೩. ವ್ಯಾಪಾರದ ಮುಖ್ಯ ಸ್ಥಳ ಬಾಗಲಕೋಟ ಉಂಟು. |
| ೪. ನೋಡತಕ್ಕ ಇಮಾರತಿಗಳು ಉಂಟು. | ೪. ನೋಡತಕ್ಕ ಇಮಾರತಿಗಳು ಉಂಟು. |
| ೫. ವತನದಾರ ಶ್ರೀಮಂತರು ಇರುವರು. | ೫. ವತನದಾರ ಶ್ರೀಮಂತರು ಇರುವರು. |

## ವೈಷಮ್ಯ

| | |
|---|---|
| ೧. ಗುಡ್ಡಗಳಿಲ್ಲ. | ೧. ಗುಡ್ಡಗಳಿವೆ. |
| ೨. ನದಿಗಳು ಒಂದಕ್ಕೊಂದು ಕೂಡಿಲ್ಲ. | ೨. ಎರಡು ನದಿಗಳು ಒಂದಕ್ಕೊಂದು ಕೂಡಿವೆ. |
| ೩. ಪಡಭೂಮಿ ಹೆಚ್ಚು. | ೩. ಎರೆಭೂಮಿ ಬೆಳೆಯುಳ್ಳದ್ದು. |
| ೪. ಭಾವಿ, ತೋಟ-ಪಟ್ಟಿಗಳ ಪ್ರಮಾಣ ಹೆಚ್ಚು. | ೪. ಭಾವಿ, ತೋಟ-ಪಟ್ಟಿಗಳ ಪ್ರಮಾಣ ಕಡಿಮೆ. |
| ೫. ಕೆರೆಗಳು ಕಡಿಮೆ. | ೫. ಕೆರೆಗಳು ಹೆಚ್ಚು. |
| ೬. ಬರಗಾಲವು ಒಂದಿಲ್ಲೊಂದು ಕಡೆಗೆ ಬೀಳುವದು. ಗುಡ್ಡಗಳಿಲ್ಲದ ಮೂಲಕ ಮಳೆ ಕಡಿಮೆ. | ೬. ಗುಡ್ಡಗಳಿದ್ದು ಮಳೆಯಾಗುವದರಿಂದ ಬರಗಾಲ ಬೀಳುವದು ಕಡಿಮೆ. |
| ೭. ೫ ತಾಲೂಕುಗಳು ಅವೆ. | ೭. ೩ ತಾಲೂಕುಗಳು ಅವೆ. |
| ೮. ಕೈಗಾರಿಕೆ, ಖನಿಜ ಪದಾರ್ಥಗಳು ಕಡಿಮೆ. | ೮. ಕೈಗಾರಿಕೆ, ನೇಕಾರಿಕೆ, ಖನಿಜ ಪದಾರ್ಥಗಳು ಹೆಚ್ಚು. |

---

## ಮಾರ್ಗಗಳು.

ಮಾರ್ಗಗಳಲ್ಲಿ ಲೈನಮಾರ್ಗ, ರೇಲ್ವೆಮಾರ್ಗ, ಜಲಮಾರ್ಗ, ವಾಯುಮಾರ್ಗ, ಕಾಲುಮಾರ್ಗ ಎಂದು ೫ ಭಾಗಗಳುಂಟು. ಆದರೆ ನಮ್ಮ ಜಿಲ್ಹೆಗೆ ನೀರಿನ ದೊಡ್ಡ ಪ್ರವಾಹ ಸಮೀಪವಿಲ್ಲದ್ದರಿಂದ ಜಲಮಾರ್ಗವು ನಮಗೆ ಕಾಣುವಂತೆ ಇಲ್ಲ. ವಾಯುಮಾರ್ಗ ಅಂದರೆ ವಿಮಾನಗಳು ಆಕಾಶದಲ್ಲಿ ಅಡ್ಡಾಡುವ ಮಾರ್ಗ.

**ಲೈನಮಾರ್ಗ** ಅಂದರೆ ಸರಕಾರದವರು ಪ್ರಜೆಗಳಿಗೆ ತ್ರಾಸು ಆಗಬಾರದೆಂದು ಚಕ್ಕಡಿ, ಮೋಟಾರಗಳು ಮೊದಲಾದ ವಾಹನಗಳು ತಿರುಗಾಡಲು ಅನುಕೂಲವಾಗುವಂತೆ ಕಟ್ಟಿಸಿದ ಮಾರ್ಗಗಳು. ಇಂಥ ತಯಾರಿಸಿದ ಮಾರ್ಗಗಳಿಗೆ ರಾಜಮಾರ್ಗವೆಂದು ಅನ್ನುವರು.

**೧. ವಿಜಾಪುರದಿಂದ ಸೊಲ್ಲಾಪೂರ ಮಾರ್ಗ:—** ತಿಡಗುಂದಿ, ಹೊರತಿ, ಬಲ್ಲೊಳ್ಳಿ, ಧೂಳಖೇಡ ಇವುಗಳ ಮೇಲಿಂದ ಸೊಲ್ಲಾಪೂರಕ್ಕೆ ಹೋಗಿದೆ.

**೨. ವಿಜಾಪುರದಿಂದ ಹುಬ್ಬಳ್ಳಿ ಮಾರ್ಗ:—** ಜುಮನಾಳ, ಹೊನಗನಹಳ್ಳಿ, ಮುಳವಾಡ, ಕೊಲ್ಹಾರ, ಕೊರ್ತಿ, ಅನಗವಾಡಿ, ಎಡಹಳ್ಳಿ, ಸೀಮಿಕೇರಿ, ಹೂಲಗೇರಿ, ಕೆರೂರ, ಗೋವನಕೊಪ್ಪ ಇವುಗಳ ಮೇಲಿಂದ ಹುಬ್ಬಳ್ಳಿಗೆ ಹೋಗಿದೆ.

ಸೊಲ್ಲಾಪೂರದಿಂದ ಹುಬ್ಬಳ್ಳಿಗೆ ಹೋದರೆ ಮೇಲಿನ ಎರಡು ಮಾರ್ಗ ಗಳ ಮೇಲಿನ ಊರುಗಳು ಹತ್ತುತ್ತವೆ. ಕಾರಣ ಈ ಲೈನವಾರ್ಗಕ್ಕೆ ಸೊಲ್ಲಾಪೂರ-ಹುಬ್ಬಳ್ಳಿ ಮಾರ್ಗವೆನ್ನುವರು.

**೩. ವಿಜಾಪುರದಿಂದ ಬಳ್ಳಾರಿ ಮಾರ್ಗ :—** ಹಿಟ್ಟಿನಹಳ್ಳಿ, ಮನ ಗೋಳಿ, ಎರನಾಳ, ಬಾಗೇವಾಡಿ, ಹೂವಿನಹಿಪ್ಪರಗಿ, ಬ್ಯಾಕೋಡ, ಢವಳಗಿ, ಮುದ್ದೇಬಿಹಾಳ, ತಂಗಡಗಿ, ಧನ್ನೂರು, ಹುನಗುಂದ, ಇಲಕಲ್ಲ ಗಳ ಮೇಲಿಂದ ಬಳ್ಳಾರಿಗೆ ಹೋಗಿದೆ.

**೪. ಬೆಳಗಾಂವಿಯಿಂದ ಬಳ್ಳಾರಿ ಮಾರ್ಗ:—** ಖಜ್ಜಿಡೋಣಿ, ಕಲಾದಗಿ, ತುಳಸಿಗೇರಿ, ಬಾಗಲಕೋಟ, ಶಿರೂರ, ಕಮತಗಿ, ಅಮೀನಗಡ, ರಕ್ಕಸಗಿ, ಹುನಗುಂದ, ಇಲಕಲ್ಲಗಳ ಮೇಲಿಂದ ಬಳ್ಳಾರಿಗೆ ಹೋಗಿದೆ.

**೫. ವಿಜಾಪುರದಿಂದ ಕೊಲ್ಹಾಪುರ ಮಾರ್ಗ:—** ತೊರವಿ, ಹೊನವಾಡಗಳ ಮೇಲಿಂದ ಕೊಲ್ಹಾಪೂರಕ್ಕೆ ಹೋಗಿದೆ.

**೬. ವಿಜಾಪುರದಿಂದ ಅಕ್ಕಲಕೋಟೆ ಮಾರ್ಗ:—** ನಾಗಠಾಣ, ಅಥರಗಾ, ತಡ್ಲಿಗಿ, ಇಂಡಿ, ಮಣ್ಣೂರುಗಳ ಮೇಲಿಂದ ಅಕ್ಕಲಕೋಟೆಗೆ ಹೋಗಿದೆ.

**೭. ವಿಜಾಪುರದಿಂದ ಮೊಗಲಾಯಿ ಇಲಾಖೆಯೊಳಗೆ ಎರಡು ಲೈನುಗಳು ಹೋಗಿವೆ.** ಒಂದು ಲೈನು ವಿಜಾಪೂರದಿಂದ ಕೌಲಗಿ, ಹೊನ್ನುಟಗಿ, ಕುಮುಟಗಿ, ಹಡಗಲಿಗಳ ಮೇಲಿಂದ ಹಿಪ್ಪರಗಿ ತನಕ

ಹೋಗಿದೆ. ಅಲ್ಲಿಂದ ಎರಡು ಕಡೆಗೆ ಉತ್ತರಕ್ಕೊಂದು ದಕ್ಷಿಣಕ್ಕೊಂದು ೨ ಲೈನು ದಾರಿಗಳು ಹೋಗಿವೆ. ಉತ್ತರ ಕಡೆಯ ಲೈನು ಕನ್ನೊಳ್ಳಿ, ಸಿಂದಗಿ, ಕಲಹಳ್ಳಿ, ಕೋರಹಳ್ಳಿ, ಆಲಮೇಲ, ದೇವಣಗಾವಿಗಳ ಮೇಲಿಂದ ಮೊಗಲಾಯಿ ಸೇರಿದೆ. ದಕ್ಷಿಣ ಕಡೆಯ ಲೈನು ದೇವೂರ, ಕೊಂಡಗೂಳಿ, ಹಂಚಲಿ, ಬೀಬಿ ಇಂಗಳಿಗಿ, ತುಂಬಗಿ, ತಾಳಿಕೋಟಿಗಳ ಮೇಲಿಂದ ಮೊಗಲಾಯಿ ಸೇರಿದೆ.

**೮. ಪಂಢರಪುರದಿಂದ ಬರುವ ಮಾರ್ಗ:—** ಇಂಡಿಯ ಮೇಲೆ ಹಾಯ್ದು ಮೊಗಲಾಯಿ ಸೇರಿದೆ. ಮಾರ್ಗದಲ್ಲಿ ಶಿರಡೋಣ, ಚಡಚಣ, ಅಂಜುಟಗಿ, ಬೇವನೂರ, ಇಂಡಿ, ಸಾಲೋಟಗಿ, ವಿಭೂತಿಹಳ್ಳಿ, ಆಲಮೇಲ ಗಳ ಮೇಲಿಂದ ಮೊಗಲಾಯಿಗೆ ಹೋಗಿದೆ.

**೯. ವಿಜಾಪುರದಿಂದ ಪಂಢರಪುರ ಮಾರ್ಗ:—** ಅರಕೇರಿ, ಮೊರಬಗಿಗಳ ಮೇಲಿಂದ ಪಂಢರಪುರಕ್ಕೆ ಹೋಗಿದೆ.

**೧೦. ಬಾಗೇವಾಡಿಯಿಂದ ಕೊಲ್ಹಾಪುರ ಮಾರ್ಗ:—**ಎರನಾಳ, ಮನಗೋಳಿ, ಹಿಟ್ಟಿನಹಳ್ಳಿ, ವಿಜಾಪೂರ, ತೊರವಿ, ಹೊನವಾಡಗಳ ಮೇಲಿಂದ ಕೊಲ್ಹಾಪುರಕ್ಕೆ ಹೋಗಿದೆ.

**೧೧. ಇಲಕಲ್ಲದಿಂದ ಬೆಳಗಾಂವಿ ಮಾರ್ಗ:—** ಹುನಗುಂದ, ರಕ್ಕಸಗಿ, ಅಮೀನಗಡ, ಕಮತಗಿ, ಶಿರೂರ, ಬಾಗಲಕೋಟ, ತುಳಸಿಗೇರಿ ಕಲಾದಗಿ, ಖಜ್ಜಿಡೋಣಿಗಳ ಮೇಲಿಂದ ಬೆಳಗಾಂವಿಗೆ ಹೋಗಿದೆ.

**೧೨. ಶ್ರೀಸಂಗಮಕ್ಷೇತ್ರದಿಂದ ೩ ಲೈನುಗಳು ಹೋಗಿವೆ.** ಒಂದು ಮಾರ್ಗವು ಮುದ್ದೇಬಿಹಾಳ ಕಡೆಗೆ, ಇನ್ನೊಂದು ಹುನಗುಂದ ಕಡೆಗೆ, ಮತ್ತೊಂದು ಬಾಗಲಕೋಟೆಯ ಕಡೆಗೆ ಹೋಗಿವೆ.

೧ನೆಯದು:—ತಂಗಡಗಿ ಮೇಲಿಂದ ಮುದ್ದೇಬಿಹಾಳಕ್ಕೆ ಹೋಗಿದೆ.

೨ನೆಯದು:—ಧನ್ನೂರ ಮೇಲಿಂದ ಹುನಗುಂದಕ್ಕೆ ಹೋಗಿದೆ.

೩ನೆಯದು:—ಸಂಗಮ, ಖಜಗಲ್ಲು, ವರಗೋಡದಿನ್ನಿ, ಹೂವನೂರ, ನಂದನೂರು, ಗಂಜಿಹಾಳ, ಬೇವೂರ, ಹಳ್ಳೂರ, ಭಗವತಿಗಳ ಮೇಲಿಂದ ಬಾಗಲಕೋಟೆಗೆ ಹೋಗಿದೆ.

## ರೇಲ್ವೆ ಮಾರ್ಗ

ಈ ಜಿಲ್ಹೆಯಲ್ಲಿ ಎಮ್. ಎಸ್. ಎಮ್. ರೇಲ್ವೆಮಾರ್ಗ ಒಂದೇ ಮಾತ್ರ ಗದಗದಿಂದ ಹುಟ್ಟಗಿಗೆ ಹೋಗಿದೆ. ಹಾದಿಯಲ್ಲಿ ಹತ್ತುವ ಊರಿಗೆ ಸ್ಟೇಶನವೆನ್ನುವರು. ಅಲ್ಲಿಯೇ ಉಗಿಬಂಡಿಯು ನಿಲ್ಲುವದು. ಈ ಜಿಲ್ಹೆಯಲ್ಲಿ ಉಗಿಬಂಡಿಯು ಬದಾಮಿ, ಕಟಗೇರಿ, ಬಾಗಲಕೋಟ, ಕಡ್ಲಿಮಟ್ಟಿ, ಸೀತಿಮನಿ, ಆಲಮಟ್ಟಿ, ತೆಲಗಿ ( ತೆಲಗಿಯಲ್ಲಿ ಇಂಜನವನ್ನು ಬದಲಿ ಮಾಡಿ ಮತ್ತೊಂದು ಹಚ್ಚುವರು. ), ಮುಳವಾಡ, ಹೊನಗನಹಳ್ಳಿ, ಜುಮನಾಳ, ವಿಜಾಪುರ, ಮಿಂಚಿನಾಳ, ನಿಂಬಾಳ, ಇಂಡಿ, ತಡವಲ, ಲಚ್ಯಾಣಗಳ ಮೇಲಿಂದ ಹೋಗಿದೆ. ಈ ರೈಲು ಬದಾಮಿ, ಬಾಗಲಕೋಟ, ಬಾಗೇವಾಡಿ, ವಿಜಾಪುರ, ಇಂಡಿ ತಾಲೂಕುಗಳಲ್ಲಿ ಹಾಯ್ದು ಹೋಗಿದೆ. ಉಳಿದ ಸಿಂದಗಿ, ಮುದ್ದೇಬಿಹಾಳ, ಹುನಗುಂದ ತಾಲೂಕಿನವರಿಗೆ ರೇಲ್ವೆ ಇಲ್ಲದ್ದರಿಂದ ಪ್ರವಾಸ ಮಾಡಲು ಬಹು ತ್ರಾಸವಾಗಿದೆ.

ಈ ರೈಲುಮಾರ್ಗವು ಆದಂದಿನಿಂದ ನಮ್ಮ ಜಿಲ್ಹೆಗೆ ಬರಗಾಲವಿಲ್ಲ. ಯಾಕಂದರೆ ಬೆಳೆಯುಳ್ಳ ದೇಶದಿಂದ ಮಾಲು ತಂದುಕೊಡುವದು, ನಮ್ಮ ಮಾಲನ್ನು ಅವರಿಗೆ ಮುಟ್ಟಿಸುವದು.

ಹಾದಿಯಲ್ಲಿ ದೊಡ್ಡ ನದಿಗಳು ಹತ್ತುವ ಕಾರಣ ನಾಲ್ಕು ದೊಡ್ಡ ಪೂಲು ಕಟ್ಟಿಸಿದ್ದಾರೆ. ಅದರ ಮೇಲೆಯೇ ಉಗಿಬಂಡಿಯು ಹೋಗುತ್ತದೆ.

೧ ಆಲೂರ ಪೂಲು, ೨ ಸೀತಿಮನಿ ಪೂಲು, ೩ ಡೋಣಿ ಪೂಲು, ೪ ಭೀಮಾನದಿ ಪೂಲು.

## ಸರಕಾರಿ ಮುಖ್ಯ ಖಾತೆಗಳು

---

ಜಿಲ್ಹೆಯಲ್ಲಿ ಆಡಳಿತೆಯ ಅನುಕೂಲಕ್ಕಾಗಿ ಎಂಟು ತಾಲೂಕುಗಳು ಇರುತ್ತವೆ. ಒಂದು ಪೇಠಾ ಇರುತ್ತದೆ. ಜಿಲ್ಹೆಯ ಮುಖ್ಯಾಧಿಕಾರಿಯು ಕಲೆಕ್ಟರನು. ತಾಲೂಕಿನ ಮುಖ್ಯಾಧಿಕಾರಿಯು ಮಾಮಲೇದಾರನು. ಪೇಠಾದ ಅಧಿಕಾರಿಯು ಮಹಾಲಕರಿಯು.

ಭೂಮಿಯ ತೆರಿಗೆ ವಸೂಲ ಮಾಡುವದು, ಅಪರಾಧಿಗಳನ್ನು ಹಿಡಿಯುವದು, ಕಳವು ಬಡಿದಾಟಗಳು ಆಗದಂತೆ ವ್ಯವಸ್ಥೆ ಮಾಡುವದು, ಕೊಡತಕ್ಕೊಳ್ಳುವ ವ್ಯವಹಾರದಲ್ಲಿ ನ್ಯಾಯವಿಚಾರಣೆಯನ್ನು ಮಾಡುವದು, ಕಾಗದ ಪತ್ರಗಳನ್ನು ನೋಂದಾಯಿಸುವದು ಇವೇ ಮೊದಲಾದ ಕೆಲಸಗಳಿಗಾಗಿ ಬೇರೆ ಬೇರೆ ಖಾತೆಗಳನ್ನು ಗೊತ್ತುಮಾಡಿಕೊಂಡಿರುವರು.

**ಮುಲ್ಕೀಖಾತೆ:—** ಈ ಖಾತೆಯ ಮುಖ್ಯ ಅಧಿಕಾರಿಯು ಕಲೆಕ್ಟರ ಸಾಹೇಬರು. ಇವರು ಜಿಲ್ಹೆಯ ಮುಖ್ಯ ಪಟ್ಟಣವಾದ ವಿಜಾಪುರದಲ್ಲಿ ಇರುವರು. ಇವರು ತೆರಿಗೆ ವಸೂಲ ಮಾಡುವದು, ಕೊಲೆ ಸುಲಿಗೆ ಮೊದಲಾದ ಅಪರಾಧಗಳ ವಿಚಾರಣೆ ಮಾಡುವದು, ಆರೋಗ್ಯವನ್ನೂ, ಶಾಂತತೆಯನ್ನೂ ಕಾಯುವದು, ಸಿಂದಿ, ಶೆರೆ, ಅಫು, ಗಾಂಜಿ ಮುಂತಾದವುಗಳ ಮಕ್ತೆಯ ಹಣ ವಸೂಲ ಮಾಡುವದು, ಜಿಲ್ಹೆಯ ಆಡಳಿತೆಯ ಖರ್ಚನ್ನು ನಡೆಯಿಸುವವು ಮುಂತಾದ ಕೆಲಸಗಳನ್ನು ಮಾಡುತ್ತಾರೆ. ಕಲೆಕ್ಟರ ಸಾಹೇಬರ ಕೆಲಸದಲ್ಲಿ ಸಹಾಯಕ್ಕಾಗಿ ನಮ್ಮ ಜಿಲ್ಹೆಯಲ್ಲಿ ಇಬ್ಬರು ಪ್ರಾಂತ ಸಾಹೇಬರು ಇರುವರು. ಒಬ್ಬರು ಉತ್ತರ ಭಾಗವಾದ ಇಂಡಿ, ಸಿಂದಿಗಿ, ವಿಜಾಪುರ, ಬಾಗೇವಾಡಿ ಈ ನಾಲ್ಕು ತಾಲೂಕುಗಳಿಗೆ. ಇನ್ನೊಬ್ಬರು ದಕ್ಷಿಣ ಭಾಗವಾದ ಮುದ್ದೇಬಿಹಾಳ, ಬಾಗಲಕೋಟ, ಹುನಗುಂದ, ಬದಾಮಿ ಈ ನಾಲ್ಕು ತಾಲೂಕುಗಳಿಗೆ ಇರುವರು. ಇವರಿಗೆ ಡಿಸ್ಟ್ರಿಕ್ಟ ಡೆಪೂಟಿ ಕಲೆಕ್ಟರವೆಂದೆನ್ನುವರು.

**ಪೋಲೀಸ ಖಾತೆ:—** ಈ ಖಾತೆಯು ಕಳವು ಬಡಿದಾಟ ಮೊದಲಾದವು ಆಗಬಾರದೆಂದು ಶಾಂತತೆಯನ್ನು ಕಾಯುವದು. ಜಿಲ್ಹೆಯಲ್ಲಿ ಪೋಲೀಸ ಸುಪರಿಂಟೆಂಡೆಂಟ ಎಂಬ ಮುಖ್ಯಾಧಿಕಾರಿಗಳು ಇರುವರು. ಇವರ ಸಹಾಯಕ್ಕಾಗಿ ಒಬ್ಬರು ಅಸಿಸ್ಟಂಟ ಪೋಲೀಸ ಸುಪರಿಂಟೆಂಡೆಂಟ, ಇನ್ನೊಬ್ಬರು ಡೆಪ್ಯೂಟಿ ಪೋಲೀಸ ಸುಪರಿಂಟೆಂಡೆಂಟ ಇರುವರು. ಇವರ ಕೈಕೆಳಗೆ ಇನಸ್ಪೆಕ್ಟರರು, ಫೌಜದಾರರು, ಜಮಾದಾರರು, ಹವಾಲದಾರರು, ಪೋಲೀಸರು ಇರುವರು.

**ನೋಂದಣಿ ಖಾತೆ:—** ಇದಾದರೂ ಕಲೆಕ್ಟರ ವಶದಲ್ಲಿರುತ್ತದೆ. ಒಬ್ಬರಿಗೊಬ್ಬರು ಸಾಲ ಕೊಡತಕ್ಕೊಳ್ಳುವ ವ್ಯವಹಾರವಾಗಲಿ, ಭೂಮಿಯ ಕೊಡತಕ್ಕೊಳ್ಳುವ ವ್ಯವಹಾರವಾಗಲಿ ಸ್ಟಾಂಪುಗಳ ಮೇಲಿಂದ ನಡೆಯುವದು. ತಾಲೂಕಿನಲ್ಲಿ ಸ್ಟಾಂಪುಗಳ ನಕಲು ಸರಕಾರಿ ಬುಕ್ಕಿನಲ್ಲಿ ದಾಖಲ ಮಾಡಿ ಸರಕಾರಿ ಮುದ್ರೆಯನ್ನು ಹಾಕಿ ಆಯಾ ಕಾಗದದವರಿಗೆ ಕೊಡುವರು. ಈ ಕೆಲಸವನ್ನು ಸಬ್ ರಜಿಸ್ಟ್ರಾರ ಎಂಬವರು ಮಾಡುವರು.

**ನ್ಯಾಯ ಖಾತೆ:—** ಸಣ್ಣದೊಡ್ಡ ನ್ಯಾಯ ನಿರ್ಣಯ ಮಾಡುವದಕ್ಕಾಗಿ ಜಜ್ಜ ಕೋರ್ಟ, ಮುನಸೂಫ ಕೋರ್ಟಗಳು ಇರುವವು. ಜಜ್ಜ ಕೋರ್ಟು ಜಿಲ್ಹೆಯ ಮುಖ್ಯ ಸ್ಥಳದಲ್ಲಿದ್ದು ಅದರ ಮುಖ್ಯಾಧಿಕಾರಿಯು ಜಜ್ಜ ಸಾಹೇಬರು. ಇವರಿಗೆ ಮುನಸೂಫರಲ್ಲಿ ಮತ್ತು ಮಾಮಲೇದಾರರಲ್ಲಿ ನಡೆದ ಖಟ್ಲೆಯ ಅಪೀಲ ಚವಕಸಿ ಮಾಡುವ ಅಧಿಕಾರ ಉಂಟು.

ಜಿಲ್ಹೆಯಲ್ಲಿಯೂ ಬೇರೆ ಕಡೆಗೂ ಮುನಸೂಫ ಕಚೇರಿ ಇದ್ದು ಮುನಸೂಫರು ಅಧಿಕಾರಿಗಳು ಇರುವರು.

**ಇಂಜನಿಯರಿಂಗ ಖಾತೆ:—** ಹೊಸ ಮಾರ್ಗ, ಸರಕಾರಿ ಕಟ್ಟಡ, ಪೂಲು ಮೊದಲಾದವುಗಳನ್ನು ಕಟ್ಟಿಸುವದು; ಭಾವಿ, ಹಳೇ ಮಾರ್ಗ, ಇಮಾರತಿ, ಪೂಲು ಮೊದಲಾದವುಗಳನ್ನು ದುರಸ್ತ ಮಾಡಿಸುವದು; ಈ ಖಾತೆಯ ಕೆಲಸಗಳು. ಈ ಖಾತೆಯ ಮುಖ್ಯ ಅಧಿಕಾರಿಯು

ಎಗ್ಸಿಕ್ಯೂಟಿವ್ಹ ಇಂಜನಿಯರ ಎಂಬವರು. ಇವರ ಕೈಕೆಳಗೆ ಅಸಿಸ್ಟಂಟ ಇಂಜನಿಯರರು, ಸಬ್ ಇಂಜನಿಯರರು ಇರುವರು.

**ಫಾರೆಸ್ಟ ಖಾತೆ:**—ದನಕರುಗಳು ಮೇಯುವದಕ್ಕೆ ಅವಶ್ಯವಿರುವ ಭೂಮಿಯನ್ನು ಕಾಯುವದು, ಅಡವಿ, ಗುಡ್ಡಗಳ ರಕ್ಷಣೆ ಮಾಡುವದು, ಗಿಡಗಂಟಿಗಳನ್ನು ಹಚ್ಚುವದು, ಅವುಗಳನ್ನು ಕಾಯುವದು, ಈ ಖಾತೆಯ ಕೆಲಸಗಳು. ಇದರ ಸಲುವಾಗಿ ಕಾದಿಟ್ಟ ಭೂಮಿಗೆ "ಫಾರೆಸ್ಟ" ಅನ್ನುವರು. ಇಲ್ಲಿರುವ ಆಫೀಸರರಿಗೆ ಫಾರೆಸ್ಟ ರೆಂಜ, ರಾವುಂಡ ಗಾರ್ಡ ಅನ್ನುವರು. ರೈತರು ತಮ್ಮ ಹೊಲದಲ್ಲಿಯ ಗಿಡಗಳನ್ನು ಕಡಿದು ಮಾರಲು ಇವರ ಹುಕುಂ ತೆಗೆದುಕೊಳ್ಳಬೇಕಾಗುವದು.

**ಔಷಧಾಲಯ:**—ಧರ್ಮಾರ್ಥವಾಗಿ ರೋಗಿಗಳ ಔಷಧೋಪಚಾರ ಮಾಡುವವಕ್ಕಾಗಿ ಜಿಲ್ಹೆಯ ಮುಖ್ಯ ಸ್ಥಳದಲ್ಲಿ ದೊಡ್ಡ ದವಾಖಾನೆ ಇರುವದು. ಇದರ ಮುಖ್ಯಾಧಿಕಾರಿಗೆ "ಸಿವ್ಹಿಲ್ ಸರ್ಜನ್" ಡಾಕ್ಟರ ರೆನ್ನುವರು. ಇದಲ್ಲದೆ ತಾಲೂಕಿನಲ್ಲಿಯೂ ದೊಡ್ಡ ದೊಡ್ಡ ಊರುಗಳ ಲ್ಲಿಯೂ ದವಾಖಾನೆ ಇರುತ್ತದೆ. ಕೆಲವು ಊರಲ್ಲಿ ದನದ ದವಾಖಾನೆಯು ಇರುವದು.

**ಆರೋಗ್ಯಖಾತೆ·**—ಆರೋಗ್ಯದ ಸಲುವಾಗಿ ಸಣ್ಣ ಮಕ್ಕಳಿಗೆ ಮೈಲಿ ತೆಗೆಯುವದು, ನೀರು ಸ್ವಚ್ಛತೆ ಇಡುವದು, ಇನ್‌ಫ್ಲುಯೆಂಝಾ, ಪ್ಲೇಗು ಮೊದಲಾದ ರೋಗಗಳು ಬರಬಾರದೆಂದು ಇನಾಕ್ಯುಲೇಶನ್ ಮಾಡುವದು ಈ ಖಾತೆಯ ಕೆಲಸಗಳು. ಸಣ್ಣ ಮಕ್ಕಳಿಗೆ ಮೈಲಿ ತೆಗೆಯು ವವರಿಗೆ ವ್ಹಾಕ್ಸಿನೇಟರ ಅನ್ನುವರು.

**ಪೋಸ್ಟ ಖಾತೆ:**—ಪತ್ರ, ಮನಿಯಾರ್ಡರ, ವ್ಹಿ. ಪಿ., ರಜಿಸ್ಟರ ಮೊದಲಾದವು ಒಂದು ಕಡೆಯಿಂದ ಬರುವವಲ್ಲದೆ ಬೇರೆ ಕಡೆಗೆ ಹೋಗು ವವು. ತಾರಿನ ಕೆಲಸವಾದರೂ ಈ ಖಾತೆಯಿಂದಾಗುವದು. ಸುದ್ದಿ ಕಳಿಸಲಿಕ್ಕೆ, ತರಿಸಲಿಕ್ಕೆ ಅಲ್ಲಲ್ಲಿಗೆ ಪೋಸ್ಟ ಆಫೀಸಿನಲ್ಲಿಯೇ ತಾರ ಆಫೀಸು

ಇರುವವು. ಪೋಸ್ಟಿನ ಹೆಡ್ ಆಫೀಸು ವಿಜಾಪುರದಲ್ಲಿರುವದು. ಇವರ ಮೇಲಾಧಿಕಾರಿಗೆ ಸುಪರಿಂಟೆಂಡೆಂಟ ಅನ್ನುವರು. ಇವರ ಸಹಾಯಕ್ಕೆ ಪೋಸ್ಟ ಇನ್ಸಪೇಕ್ಟರರು ಇರುವರು.

**ಒಕ್ಕಲತನ ಖಾತೆ** (ಶೇತಕಿ):—ಬೆಳೆಗಳು ಹೆಚ್ಚು ಬರುವಂತೆ ಸುಧಾರಣೆ ಮಾಡುವದು, ಅವುಗಳಿಗೆ ರೋಗ ಬಾರದಂತೆ ಮಾಡುವದು, ಒಕ್ಕಲತನದ ಸುಧಾರಿಸಿದ ಆಯುಧ ಹಾಗೂ ಗೊಬ್ಬರ ಇವುಗಳ ಮಹತ್ವ ವನ್ನು ತಿಳಿಸಿ ಹೇಳುವದು ಈ ಖಾತೆಯ ಕೆಲಸಗಳು. ಇದರ ಮುಖ್ಯ ಅಧಿಕಾರಿಯು ಜಿಲ್ಹೆಯಲ್ಲಿ ಡಿಸ್ಟ್ರಿಕ್ಟ ಓವ್ಹರಸಿಯರು ಇರುವರು. ಇವರ ಸಹಾಯಕ್ಕಾಗಿ ಓವ್ಹರಸಿಯರ ಇರುವರು.

**ಶಾಲಾಖಾತೆ**:—ಇದು ಮುಖ್ಯವಾಗಿ ಜಿಲ್ಹೆಯ ಸ್ಕೂಲಬೋರ್ಡಿನ ಕೆಳಗೆ ಸಾಗುವದು. ಇದರ ಮುಖ್ಯಾಧಿಕಾರಿಯು ಸ್ಕೂಲಬೋರ್ಡ "ಚೇರಮನ್"ರು. ಸ್ಕೂಲಬೋರ್ಡಿನಲ್ಲಿ ಎಡ್ಮಿನಿಸ್ಟ್ರೇಟಿವ್ಹ ಆಫೀಸರರು ಇರುವರು. (ಇವರಿಗೆ ಏ. ಓ. ಸಾಹೇಬರೆನ್ನುವರು.) ಇವರು ಬೋರ್ಡಿನ ಜವಾಬದಾರರು. ಗವ್ಹರ್ನಮೆಂಟ ಆಫೀಸರರು. ಡೆಪೂಟಿ ಎಜ್ಯುಕೇಶನಲ್ ಇನ್ಸಪೇಕ್ಟರರು, ಅಸಿಸ್ಟಂಟ ಡೆಪೂಟಿ ಎಜ್ಯುಕೇಶನಲ್ ಇನ್ಸಪೇಕ್ಟರರು ಶಾಲೆಗಳ ಇನ್ಸಪೇಕ್ಶನ್ ಮಾಡುವರು.

**ಮುನಸಿಪಾಲಿಟಿ**:—ದೊಡ್ಡ ದೊಡ್ಡ ಊರುಗಳ ಜನರು ತಮ್ಮ ತಮ್ಮ ಊರಿನ ಆರೋಗ್ಯತೆಯನ್ನೂ, ಸ್ವಚ್ಛತೆಯನ್ನೂ, ಶಿಕ್ಷಣಪ್ರಸಾರ ಮೊದಲಾದ ಸಾರ್ವಜನಿಕ ಕೆಲಸಗಳನ್ನು ಮಾಡುವ ಉದ್ದೇಶದಿಂದ ಸ್ಥಾಪಿಸಲ್ಪಟ್ಟ ಸಂಸ್ಥೆಗೆ ಮುನಸಿಪಾಲಿಟಿ ಅನ್ನುವರು.

ಊರೊಳಗೆ ಬರುಹೋಗುವ ಸಾಮಾನುಗಳ ಮೇಲಿನ ಜಕಾತಿ, ಮನಿಪಟ್ಟಿ, ವಾಹನಗಳ ಮೇಲಿನ ಕರ ಮುಂತಾದವುಗಳಿಂದ ವಸೂಲ ಮಾಡಿ ಬಂದ ಹಣದಿಂದ ಮುನಸಿಪಾಲಿಟಿಯು ಖರ್ಚನ್ನು ಸಾಗಿಸುವರು. ಈ ಸಂಸ್ಥೆಗೆ ಜನರಿಂದ ಆರಿಸಲ್ಪಟ್ಟ ಸಭಾಸದರು ಇರುವರು. ಅವರಲ್ಲಿ ಅಧ್ಯಕ್ಷ (ಪ್ರೆಸಿಡೆಂಟ), ಉಪಾಧ್ಯಕ್ಷ (ವ್ಹಾಯಿಸ ಪ್ರೆಸಿಡೆಂಟ) ರನ್ನು ಆರಿಸುವರು.

ಇಲ್ಲಿಯು ಮುಖ್ಯ ಅಧಿಕಾರಿಗಳಿಗೆ "ಚೀಫ ಆಫೀಸರ"ರೆನ್ನುವರು. ಇವರು ಎಲ್ಲ ಕೆಲಸಗಳನ್ನು ನೋಡುವರು.

**ಲೋಕಲ್ ಬೋರ್ಡ**:—ಮುನಸಿಪಾಲಿಟಿಯು ಪಟ್ಟಣಗಳಲ್ಲಿ ಮಾಡುವ ಕೆಲಸಗಳನ್ನೇ "ಜಿಲ್ಹಾ ಲೋಕಲ್ ಬೋರ್ಡ" ಎಂಬ ಸಂಸ್ಥೆಯು ಜಿಲ್ಹೆಯಲ್ಲಿ ಮಾಡುವದು. ಈ ಸಂಸ್ಥೆಯು ಜಿಲ್ಹೆಯಲ್ಲಿಯ ಕೆಲಸಗಳನ್ನು ಮಾಡುತ್ತಿರುವದರಿಂದ ಇದಕ್ಕೆ ಜಿಲ್ಹಾ ಲೋಕಲ್ ಬೋರ್ಡ ಅನ್ನುವರು. ಶಿಕ್ಷಣಕ್ಕೆ ಸಂಬಂಧಿಸಿದ ಆಯುವ್ಯಯದ ಕೆಲಸ, ಶಾಲೆಗಳ ಇಮಾರತಿಗಳನ್ನು ಕಟ್ಟಿಸುವದು, ಔಷಧಾಲಯಗಳನ್ನು ಸ್ಥಾಪಿಸುವದು, ಭಾವಿ, ಕೆರೆ, ಧರ್ಮಶಾಲೆಗಳನ್ನು ಕಟ್ಟಿಸುವದು, ಲೈನಮಾರ್ಗಗಳನ್ನು ದುರಸ್ತಿ ಮಾಡಿಸುವದು, ಹೊಸ ಮಾರ್ಗಗಳನ್ನು ಗೊತ್ತುಪಡಿಸುವದು, ಬರಗಾಲ ಬಿದ್ದ ಕಾಲಕ್ಕೆ ಹೊಸ ಹೊಸ ಕೆಲಸಗಳನ್ನು ಹುಡುಕಿ ಮಾಡಿಸುವದು ಇವೆಲ್ಲವು ಬೋರ್ಡಿನ ಕೆಲಸಗಳು.

ಈ ಎಲ್ಲ ಕೆಲಸಗಳನ್ನು ಇಂಜನಿಯರಿಂಗ ಖಾತೆಯವರು ಮಾಡುವರು.

ಪ್ರಶ್ನೆಗಳು:—ಜಿಲ್ಹೆಯ ಭಾಷೆಗಳಾವವು? ಜಾತಿಗಳೆಷ್ಟು? ಈ ಜಿಲ್ಹೆಯಲ್ಲಿ ಯಾವ ನದಿಯಿಂದ ಎಷ್ಟು ಭಾಗ ಮಾಡಿದೆ? ಉತ್ತರಭಾಗ, ದಕ್ಷಿಣಭಾಗಗಳ ಸಾಮ್ಯ, ವೈಷಮ್ಯ ಹೇಳಿರಿ? ಮಾರ್ಗಗಳೆಂದರೇನು? ಅವು ಯಾವವು? ಯಾವ ಮಾರ್ಗದಿಂದ ಯಾವ ಸಾಧನ ಬೇಕು? ರೇಲ್ವೆಮಾರ್ಗದಿಂದ ಉಪಯೋಗವೇನು? ಸ್ಟೇಶನ್ ಅಂತಾ ಯಾತಕ್ಕೆ ಅನ್ನುವರು? ಈ ಜಿಲ್ಹೆಯಲ್ಲಿ ದೊಡ್ಡ ಸ್ಟೇಶನುಗಳಾವವು? ಸರಕಾರಿ ಖಾತೆಗಳಾವವು? ಮಾಮಲೇದಾರರ ಕೆಲಸಗಳಾವವು? ಕಮಿಶನರರು ಎಲ್ಲಿರುವರು? ಪೋಲೀಸ ಸಾಹೇಬರು ಎಲ್ಲಿರುವರು? ಮುನಸಿಪಾಲಿಟಿ ಅಂದರೇನು? ಈ ಜಿಲ್ಹೆಯಲ್ಲಿ ಮುನಸಿಪಾಲಿಟಿ ಇದ್ದ ಊರುಗಳಾವವು? ಅದರ ಮೇಲ್ವಿಚಾರಣೆಯನ್ನು ಯಾರು ಮಾಡುವರು?

---

ಈ ಜಿಲ್ಹೆಯಲ್ಲಿ ೮ ತಾಲೂಕುಗಳು, ೧ ಪೇಟಾ ಉಂಟು. ಅವು ಯಾವವೆಂದರೆ:—ವಿಜಾಪುರ, ಇಂಡಿ, ಸಿಂದಗಿ, ಬಾಗೇವಾಡಿ, ಮುದ್ದೇಬಿಹಾಳ, ಬಾಗಲಕೋಟ, ಬದಾಮಿ, ಹುನಗುಂದ ತಾಲೂಕುಗಳು, ಬೀಳಗಿ ಎಂಬ ಪೇಟಾ ಇರುತ್ತದೆ.

# ವಿಜಾಪುರ ತಾಲೂಕು

**ಮೇರೆಗಳು:**— ಉತ್ತರಕ್ಕೆ ಇಂಡಿ ತಾಲೂಕು, ಪೂರ್ವಕ್ಕೆ ಸಿಂದಗಿ ತಾಲೂಕು, ದಕ್ಷಿಣಕ್ಕೆ ಕೃಷ್ಣಾ ನದಿ ಮತ್ತು ಬಾಗಲಕೋಟ, ಬಾಗೇವಾಡಿ ತಾಲೂಕುಗಳು, ಪಶ್ಚಿಮಕ್ಕೆ ಬೆಳಗಾಂವಿ ಜಿಲ್ಹೆ ಮತ್ತು ಜಮುಖಂಡಿ, ಜತ್ತ ಸಂಸ್ಥಾನಗಳಿವೆ.

ಇಂಗ್ಲಿಷರು (ನಮ್ಮನ್ನು ಆಳುವವರು) ಪೇಶ್ವೆಯರ ಕಡೆಯಿಂದ ವಿಜಾಪುರ ರಾಜ್ಯವನ್ನು ತಕ್ಕೊಂಡಾಗ ಪೇಶ್ವೆಯರು ಹಾಕಿಕೊಟ್ಟ ಜಹಾಗೀರುಗಳನ್ನು ಜಹಾಗೀರದಾರರಿಗೆ ಬಿಟ್ಟುಕೊಟ್ಟಿದ್ದರಿಂದ ವಿಜಾಪುರ ತಾಲೂಕಿನ ಪಶ್ಚಿಮ ಭಾಗವು ತುಂಡುತುಂಡಾಗಿರುವದು.

ಈ ತಾಲೂಕಿನ ಕ್ಷೇತ್ರಫಲ ೫,೮೦,೪೨೬ ಎಕರೆ ಮೈಲು ಇದ್ದು, ಜನಸಂಖ್ಯೆಯು ೧,೩೮,೩೪೫, ತೆರಿಗೆಯ ಉತ್ಪನ್ನವು ೧,೦೨,೪೧೬ ರೂ. ಇರುತ್ತದೆ.

**ಸ್ಥಾನ:**— ಇದು ಈ ಜಿಲ್ಹೆಯ ವಾಯವ್ಯ ಭಾಗದ ಮಧ್ಯದಲ್ಲಿರುವದು. ಈ ತಾಲೂಕಿನಲ್ಲಿ ೯೮ ಸರಕಾರಿ ಹಳ್ಳಿಗಳೂ, ೧೦ ದುಮಾಲಿ ಹಳ್ಳಿಗಳೂ ಉಂಟು.

**ಭೂಮಿ:** ಡೋಣಿಯ ಎಡಬಲದಲ್ಲಿ ಬೆಳೆಯುಳ್ಳ ಎರೆಭೂಮಿಯುಂಟು. ಉತ್ತರಭಾಗದಲ್ಲಿ ಕಿರ ಸಣ್ಣ ಗುಡ್ಡಗಳಿದ್ದು ಗರಸು ಭೂಮಿ ಅದೆ. ಮಮದಾಪುರ ಹತ್ತರ ಗುಡ್ಡವಿದ್ದು ಉಳಿದುದೆಲ್ಲ ಬೈಲುಭೂಮಿಯು.

**ದೊಡ್ಡ ಊರುಗಳೂ, ಸಾಲೆಯಿದ್ದ ಊರುಗಳೂ:**— ವಿಜಾಪುರ, ಬಬಲೇಶ್ವರ, ಮಮದಾಪುರ, ಹೊನವಾಡ, ಬಾಬಾನಗರ, ಬಬಲಾದ, ಬೆಳ್ಳುಬ್ಬಿ, ಬಿಜ್ಜರಗಿ, ಹಿಟ್ಟಿನಹಳ್ಳಿ, ಹೊನ್ನುಟಗಿ, ಜೈನಾಪುರ, ಜಂಬಿಗಿ, ಜುಮನಾಳ, ಕಾಖಂಡಗಿ, ಕಣಮುಚ್ಚನಾಳ, ಕನ್ನೂರ, ಕಾರಜೋಳ, ನಾಗಠಾಣ, ನಿಡೋಣಿ, ಸಾರವಾಡ, ಶಿವಣಗಿ, ತೊರವಿ, ದೇವರಗೆಣ್ಣೂರ.

**ಸಂತೆಯಾಗುವ ಊರುಗಳು:**— ವಿಜಾಪುರ, ಮಮದಾಪುರ, ಕನ್ನೂರ, ಬಬಲಾದ, ಬಬಲೇಶ್ವರ.

**ಪೋಲೀಸಗ್ಯಾಟ ಇದ್ದ ಊರುಗಳು:**—ವಿಜಾಪುರದಲ್ಲಿ ಹೆಡ್ ಕ್ವಾರ್ಟರ, ಠಾಣಾಪೋಸ್ಟುಗಳು ಇರುತ್ತವೆ. ಜಂಬಿಗಿ, ತಿಡಗುಂದಿ, ಹೊನವಾಡಗಳಲ್ಲಿ ಪೋಸ್ಟು ಇರುತ್ತದೆ. ಬಬಲೇಶ್ವರದಲ್ಲಿ ಠಾಣಾಪೋಸ್ಟು ಉಂಟು.

**ಪೋಸ್ಟ ಆಫೀಸು ಇದ್ದ ಊರುಗಳು:**—ವಿಜಾಪುರದಲ್ಲಿ ಹೆಡ್ ಪೋಸ್ಟು ಇರುತ್ತದೆ. ಮಮುದಾಪುರ, ಕಾಖಂಡಕಿ, ಬಬಲೇಶ್ವರ, ಹೊನ ವಾಡ, ಕನ್ನೂರ, ಬಬಲಾದ, ಕನಮಡಿ, ಬಿಜ್ಜರಗಿ, ತೊರವಿ ಈ ಊರು ಗಳಲ್ಲಿ ಬ್ರ್ಯಾಂಚ ಪೋಸ್ಟ ಆಫೀಸುಗಳು ಉಂಟು. ಬ್ರ್ಯಾಂಚ ಪೋಸ್ಟ ಆಫೀಸುಗಳ ಟಪಾಲ ಕೆಲಸ ಶಾಲಾ ಮಾಸ್ತರ ಕಡೆಗೆ ಇರುತ್ತದೆ. ಇದರ ಪಗಾರ ಪೋಸ್ಟ ಖಾತೆಯವರು ಬೇರೆ ಕೊಡುವರು. ತಾರ ಆಫೀಸು, ದೊಡ್ಡ ಪೋಸ್ಟುಗಳಿದ್ದ ಊರಿಗೆ ಇರುತ್ತದೆ. ಈ ತಾಲೂಕಿನಲ್ಲಿ ವಿಜಾಪುರ ದಲ್ಲಿ ತಾರ ಆಫೀಸು ಅದೆ.

## ಜಾತ್ರೆಯಾಗುವ ಊರುಗಳು

ವಿಜಾಪುರದಲ್ಲಿ **ಶ್ರೀಸಿದ್ಧರಾಮೇಶ್ವರನ ಜಾತ್ರೆಯು** ಸಂಕ್ರಮಣ ದಿವಸ ಆಗುವದು. ಆ ಕಾಲಕ್ಕೆ ಒಕ್ಕಲತನ ಮತ್ತು ಕೈಗಾರಿಕೆ ಸಾಮಾನು ಗಳ ಪ್ರದರ್ಶನಗಳು ಜರುಗುವವು. ಉತ್ತಮ ತರಗತಿಯ ಸಾಮಾನುಗಳಿಗೆ ಮತ್ತು ದನಕರುಗಳಿಗೆ ಇನಾಮು ಕೊಡುವರು. ಹತ್ತೆಂಟು ಸಾವಿರ ಜನರು ಕೂಡುವರು. **ಬಬಲೇಶ್ವರದಲ್ಲಿ ಸಿದ್ಧೇಶ್ವರ ಅಂಬಲಿವ**ಮುತ್ತಪ್ಪ ಎಂಬ ದೇವರ ಜಾತ್ರೆಯು ಜ್ಯೇಷ್ಠ ವದ್ಯ ೩ಂಕ್ಕೆ ಆಗುವದು. ಕಾಖಂಡಕಿಯಲ್ಲಿ— **ಮಹಿಪತಿಸ್ವಾಮಿಗಳ** ಜಾತ್ರೆಯಾಗುತ್ತದೆ. ತೊರವಿಯಲ್ಲಿ— **ನರಸಿಂಹ ದೇವರ** ಜಾತ್ರೆಯಾಗುತ್ತದೆ. ಉಪ್ಪಲದಿನ್ನಿಯಲ್ಲಿ— **ಸಂಗಮನಾಥನ** ಜಾತ್ರೆಯಾಗುತ್ತದೆ. ದೇವರಗೆಣ್ಣೂರಲ್ಲಿ— **ಲಕ್ಷ್ಮೀದೇವಿಯ** ಜಾತ್ರೆ ಯಾಗುತ್ತದೆ.

**ಸ್ಟೇಶನ್ ಇದ್ದ ಊರುಗಳು:**— ಮಿಂಚನಾಳ, ವಿಜಾಪುರ, ಜುಮನಾಳ.

**ಕೆರೆ ಇದ್ದ ಊರುಗಳು:** –ವಿಜಾಪುರ ಹತ್ತರ ಭೂತನಾಳ ಕೆರೆ, ಮಮದಾಪುರ, ಕುಮಟಗಿ, ಈ ಊರುಗಳಲ್ಲಿ ಕೆರೆಗಳುಂಟು.

## ಹೊಳೆಗಳು

**ಡೋಣಿ:**— ಇದು ಈ ತಾಲೂಕಿನ ಮಧ್ಯದಲ್ಲಿ ಹರಿದು ಬಾಗೇವಾಡಿ ತಾಲೂಕಿನಲ್ಲಿ ಸೇರಿರುತ್ತದೆ. ಇವರ ದಂಡೆಯಲ್ಲಿ ದಾಶ್ಯಾಳ, ಧನ್ಯಾಳ, ಕಣಮುಚನಾಳ, ಸಾರವಾಡ, ತೊನಶ್ಯಾಳ ಈ ಊರುಗಳುಂಟು.

**ಕೃಷ್ಣಾ :**— ಈ ತಾಲೂಕಿನ ದಕ್ಷಿಣಭಾಗದಲ್ಲಿ ಹರಿದು, ಬಾಗೇವಾಡಿ ತಾಲೂಕಿನಲ್ಲಿ ಸೇರಿದೆ. ಇದರ ದಂಡೆಯಲ್ಲಿ ದೇವರಗೆಣ್ಣೂರ, ಜೈನಾಪುರ, ಬೆಳ್ಳುಬ್ಬಿ ಈ ಊರುಗಳಿವೆ.

## ಲೈನಮಾರ್ಗ

**೧. ವಿಜಾಪುರದಿಂದ ಕೊಲ್ಹಾಪುರಕ್ಕೆ ಹೋಗುವ ಮಾರ್ಗ :**— ತೊರವಿ, ಹೊನವಾಡ ಮೇಲಿಂದ ಹೋಗಿದೆ.

**೨. ವಿಜಾಪುರದಿಂದ ಪಂಢರಪುರ ಮಾರ್ಗ:**— ಅರಕೇರಿ, ಮೊರಬಗಿಗಳ ಮೇಲಿಂದ ಹೋಗಿದೆ.

**೩. ವಿಜಾಪುರದಿಂದ ಸೊಲ್ಲಾಪುರ ಮಾರ್ಗ:**— ಶಿಡಗುಂದಿ ಮೇಲಿಂದ ಹೋಗಿದೆ.

**೪. ವಿಜಾಪುರದಿಂದ ಅಕ್ಕಲಕೋಟೆಯ ಮಾರ್ಗ**—ನಾಗಠಾಣ ಮೇಲಿಂದ ಹೋಗಿದೆ.

**೫. ವಿಜಾಪುರದಿಂದ ಹಿಪ್ಪರಗಿ ಮಾರ್ಗ:**– ಕೌಲಗಿ,ಹೊನ್ನುಟಗಿ, ಕುಮುಟಗ್ಗಿ, ಶಿವಣಗಿಗಳ ಮೇಲಿಂದ ಹೋಗಿದೆ.

**೬. ವಿಜಾಪುರದಿಂದ ಬಬಲೇಶ್ವರ ಮಾರ್ಗ :**— ಖತಿಜಪೂರ, ಸಾರವಾಡಗಳ ಮೇಲಿಂದ ಹೋಗಿದೆ.

**೭. ವಿಜಾಪುರದಿಂದ ಬಾಗೇವಾಡಿ ಮಾರ್ಗ :**—ಹಿಟ್ಟಿನಹಳ್ಳಿ ಮೇಲಿಂದ ಹೋಗಿದೆ.

೮. **ವಿಜಾಪುರದಿಂದ ಹುಬ್ಬಳ್ಳಿ ಮತ್ತು ಬಾಗಲಕೋಟ ಮಾರ್ಗ:**—ಜುಮನಾಳ, ಹೊನಗನಹಳ್ಳಿ (ದೊಡ್ಡಹಳ್ಳಿ) ಮೇಲಿಂದ ಹೋಗಿದೆ.

## ಊರುಗಳ ವಿಶೇಷ ವರ್ಣನೆ

**ವಿಜಾಪುರ:**— ಇದಕ್ಕೆ ಮೊದಲು ಬಿಜ್ಜನಹಳ್ಳಿ (ವಿಜಯಪುರ) ಎಂಬ ಹೆಸರು ಇತ್ತು. ವಿಜಯಪುರ ಅನ್ನುವ ಬದಲು ವಿಜಾಪುರ ಅನ್ನುವರು. ಇದು ಪೂರ್ವಕಾಲದಿಂದಲೂ ಪ್ರಸಿದ್ಧವಾದ ಪಟ್ಟಣ. ಆದಿಲಶಾಹಿ ಅರಸರ ಕಾಲದಲ್ಲಿ ಬಹಳ ವಿಸ್ತಾರವನ್ನೂ ವೈಭವವನ್ನೂ ಹೊಂದಿತ್ತು. ಇಲ್ಲಿ ಆ ಕಾಲದ ಅರಸರು ಕಟ್ಟಿಸಿದ **ಬೋಳಗುಮ್ಮಟ, ಜುಮ್ಮಾ ಮಸೀದೆ, ಆಸಾರಮಹಾಲ, ಮೆಹತರಿಮಹಾಲ, ಉಪ್ಪಲಿಬುರಜ, ಆರಕಿಲ್ಲೆ, ಇಬ್ರಾಹಿಮರೋಜಾ, ಮುತ್ತಿನಮಸೀದೆ** ಎಂಬ ಇಮಾರತಿಗಳೂ, **ಮುಲಕಮೈದಾನ, ಲಾಂಡಕಸಾಲ** ಎಂಬ ಎರಡು ದೊಡ್ಡ **ತೋಫುಗಳೂ, ತಾಸಬಾವಡಿ, ಚಂದಾಬಾವಡಿ** ಎಂಬ ದೊಡ್ಡ ಬಾವಿಗಳೂ ಇರುತ್ತವೆ. **ಶ್ರೀಸಿದ್ಧೇಶ್ವರ ದೇವಾಲಯವೂ** ನೋಡತಕ್ಕಂತಹದು. ಇವು ಜನರನ್ನು ಆಶ್ಚರ್ಯಗೊಳಿಸುತ್ತವೆ.

ಇದು ಜಿಲ್ಹೆಯ ಮತ್ತು ತಾಲೂಕಿನ ಮುಖ್ಯ ಸ್ಥಳ. ಇಲ್ಲಿ ಕಲೆಕ್ಟರರ ಆಫೀಸು, ಜಜ್ಜಕೋರ್ಟು, ಮುನಸೂಫಕೋರ್ಟು, ಮಾಮಲೇದಾರರ ಕಚೇರಿ, ಇಂಜನಿಯರರ ಕಚೇರಿ, ಮುನಸಿಪಾಲಿಟಿ ಕಚೇರಿ, ಪೋಸ್ಟಆಫೀಸು, ದವಾಖಾನೆ, ಹೈಸ್ಕೂಲು, ಫಾರೆಸ್ಟ ಆಫೀಸು, ಪೋಲೀಸ ಹೆಡ್‌ಕ್ವಾರ್ಟರು, ಜೇಲು, ಶಾಲಾ ಡೆಪೂಟಿ ಇನಸ್ಪೆಕ್ಟರರ ಆಫೀಸು, ಡಿಸ್ಟ್ರಿಕ್ಟ ಲೋಕಲ್ ಬೋರ್ಡು ಹಾಗೂ ಸ್ಕೂಲಬೋರ್ಡುಗಳ ಆಫೀಸುಗಳು, ಆ್ಯಂಟಿಫ್ಯಾಮಿನ್ ಇನ್‌ಸ್ಟಿಟ್ಯೂಟ, ಬ್ಯಾಂಕುಗಳು ಅವೆ.

ಈ ಊರಿಂದ ಎಲ್ಲ ತರದ ಕಾಳುಕಡಿಗಳೂ, ಹತ್ತಿ, ಅರಳೆ ಮೊದಲಾದವುಗಳೂ ಪರಸ್ಥಳಕ್ಕೆ ಹೋಗುತ್ತವೆ. ಇಂಡಿ, ಸಿಂದಗಿ, ಬಾಗೇವಾಡಿ, ಜತ್ತ, ಜಮಖಿಂಡಿ ಮುಂತಾದ ಊರುಗಳ ವ್ಯಾಪಾರಕ್ಕೆ ಇದು ಪಡಮೂಲಿ

ಆಗಿದೆ. ಈ ಊರಲ್ಲಿ ಮೊದಲು ಉತ್ತಮ ಊದಿನಕಡ್ಡಿ, ಮಸಾಲಿ ಎಣ್ಣಿ, ಬುಕ್ಕಿಟ್ಟುಗಳು ತಯಾರಾಗುತ್ತಿದ್ದವು. ಈಗ ಉತ್ತಮ ಚರ್ಮದ ಜೋಡು ತಯಾರಾಗುತ್ತವೆ. ಈ ಊರ ಪಶ್ಚಿಮಕ್ಕೆ ೨-೩ ಮೈಲು ಅಂತರವಿರುವ **ಭೂತನಾಳ ಕೆರೆಯ** ನೀರು ನಳಗಳ ಮೂಲಕ ಊರಲ್ಲೆಲ್ಲ ಪೂರೈಸಲ್ಪಡುವದು. ಈ ಕೆರೆ ನೋಡತಕ್ಕಂತಹದಿದೆ.

**ತೊರವಿ:**—ವಿಜಾಪುರದ ಪಶ್ಚಿಮಕ್ಕೆ ೪ ಮೈಲುಗಳ ಮೇಲೆ ಅದೆ. ಇದು ಮೊದಲು ವಿಜಾಪುರದ ಭಾಗವಾಗಿತ್ತು. ಕೆಲವು ಕಾಲದ ಮೇಲೆ ೨ನೆಯ ಇಬ್ರಾಹಿಮನು ಇಲ್ಲಿ ಅರಮನೆಗಳನ್ನು ಕಟ್ಟಿಸಿ ಇರುತ್ತಿದ್ದನು. ಆಗ ಒಂದು ನಾಯಿಯು ನರಿಯ ಬೆನ್ನಟ್ಟಿ ಬರಲಾಗಿ, ನರಿಯು ತಿರುಗಿ ಬಂದು ನಾಯಿಯನ್ನು ಹಿಡಿದದ್ದರಿಂದ, ಬಾದಶಹನು ಅಪಶಕುನವಾಯಿತೆಂದು ಈ ಊರು ಬಿಟ್ಟು ವಿಜಾಪುರಕ್ಕೆ ಹೋಗಿ, ಅಲ್ಲಿ ರಾಜ್ಯವಾಳಿದನೆಂದು ಹೇಳುತ್ತಾರೆ. ಈ ಊರ ಹೊರಗೊಂದು ಕೆರೆಯು ಅದೆ. ಅದರಲ್ಲೊಂದು ಹೊಂಡವು ೧,೨೦೦ ಫೂಟು ಚಚ್ಚೌಕು ಇದೆ. ಮೊದಲು ವಿಜಾಪುರಕ್ಕೆ ಈ ಕೆರೆಯಿಂದಲೇ ನೀರು ನಳದಿಂದ ಪೂರೈಸಲ್ಪಡುತ್ತಿತ್ತು. ಇಲ್ಲಿ **ನರಸಿಂಹದೇವರ ಗುಡಿಯು** ಗವಿಯು ಹಾಗೆ ಇರುತ್ತದೆ.

**ಬಬಲೇಶ್ವರ:**—ವಿಜಾಪುರದ ನೈಋತ್ಯಕ್ಕೆ ೧೫ ಮೈಲಿನ ಮೇಲೆ ಅದೆ. ಈಗ ಊರು ಇದ್ದ ಸ್ಥಳದಲ್ಲಿ ಮೊದಲು ಬಬುಲ (ಜಾಲಿಯ) ಬನವಿದ್ದು ಕಳ್ಳರಿಗೆ ಆಶ್ರಯಸ್ಥಾನವಾಗಿತ್ತು. ಅದರಿಂದ ನೆರೆಹಳ್ಳಿಯ ಜನರಿಗೆ ಬಹಳ ಉಪದ್ರವವಾಗಲು, ಅವರು ಜಾಲಿಯನ್ನು ಕಡಿದರು. ಮುಂದೆ ಜಂಗಮಶೆಟ್ಟಿಯವರ ಮುರುಲಿಂಗಪ್ಪನೆಂಬುವವನು ಸನ್ ೧೭೮೦ರಲ್ಲಿ ಬಬಲೇಶ್ವರ ಎಂಬ ಹೆಸರಿನ ಊರನ್ನು ಸ್ಥಾಪಿಸಿದನು. ಈ ಊರ ಸುತ್ತುಮುತ್ತು ಏಳು ಹಳ್ಳಿಗಳು ಇದ್ದವು. ಅಲ್ಲಿಯ ಜಾಲಿ ಬನ (ಗುಂಪು) ದಲ್ಲಿ ಒಂದು ಜೈನಬಸ್ತಿ ಇತ್ತು. ಆ ಬಸ್ತಿಯಲ್ಲಿ ವಿಜಯಪುರದ ಒಬ್ಬ ಸಿದ್ಧಪುರುಷ ಶಿವಶರಣರು ವಾಸಮಾಡಿಕೊಂಡಿದ್ದರು. ಅವರು ಹಸಿವೆ, ನೀರಡಿಕೆಗಳಿಂದ ಬಳಲುವ ಹಾದಿಕಾರರಿಗೆ ತಮ್ಮ ಹತ್ತರವಿದ್ದ ಗುಂಡಿಗಿ ಅಂಬಲಿಯಿಂದ ತೃಪ್ತಿಪಡಿಸುತ್ತಿದ್ದರು. ಅವರು ಆ ಗುಡಿಯಲ್ಲಿಯೇ ಐಕ್ಯರಾದರು. ಅದೇ

ಸ್ಥಳದಲ್ಲಿಯೇ ಜಂಗಮಶೆಟ್ಟಿಯ ಮರುಲಿಂಗಪ್ಪನು ಲಿಂಗಸ್ಥಾಪನೆ ಮಾಡಿ, ಪೂಜಾ ಮುಂತಾದ್ದನ್ನು ಮಾಡುತ್ತಿದ್ದನು. ಅವನು ಈ ಸಿದ್ಧಪುರುಷನಿಗೆ ಅಂಬಲಿಮುತ್ತಪ್ಪನೆಂದು ಹೆಸರಿಟ್ಟನು. ಇನ್ನೊಬ್ಬ ಸಿದ್ಧಪುರುಷನು ಈ ಊರ ಮಧ್ಯದಲ್ಲಿರುವದೊಂದು ದೊಡ್ಡ ಹುತ್ತಿನಲ್ಲಿ ಐಕ್ಯನಾಗಿದ್ದಾನೆ ಎಂದು ಮರುಲಿಂಗಪ್ಪಶೆಟ್ಟಿಯ ಸ್ವಪ್ನದಲ್ಲಿ ಈ ಅಂಬಲಿಮುತ್ತಪ್ಪನು ಹೇಳಿದ್ದರಿಂದ ಆ ಹುತ್ತನ್ನು ಅಗಿಸಿದರು. ಅಲ್ಲಿ ಲಿಂಗಮೂರ್ತಿ ಇದ್ದುದರಿಂದ ಅದಕ್ಕೆ ಸಿದ್ಧರಾಮೇಶ್ವರ ಎಂದು ಹೆಸರಿಟ್ಟು ಗುಡಿಯನ್ನು ಕಟ್ಟಿಸಿ ಪೂಜಿಸಹತ್ತಿದರು. ಅಂದಿನಿಂದ ಈ ಊರಿಗೆ (ಬಬಲ ಮತ್ತು ಈಶ್ವರ ಕೂಡಿಸಿ) ಬಬಲೇಶ್ವರ ಎಂದು ಕರೆಯಹತ್ತಿದರು. ಅಂಬಲಿಮುತ್ತಪ್ಪನ ಗುಡಿಯು ಊರ ಹೊರಗೆ ಪೂರ್ವಕ್ಕೆ ಅದೆ. ಈ ಇಬ್ಬರ ಜಾತ್ರೆಯು ಪ್ರತಿ ವರುಷ ಜ್ಯೇಷ್ಠ ವದ್ಯ ೩೦ರಿಂದ (ಅಮಾವಾಸಿಯಿಂದ) ಐದು ದಿವಸ ಬಹು ವಿಜೃಂಭಣೆಯಿಂದ ಜರುಗುವದು. ಈ ಜಾತ್ರೆಯು ಅಲ್ಲಿಆದಿಲಶಹಾರವರ ಕಾಲದಿಂದ ಈ ಹೊತ್ತಿನ ತನಕ ಜರುಗುತ್ತ ಬಂದಿದೆ. ಈ ದೇವರಿಗೆ ಸರಕಾರದವರು ನಾಲ್ಕು ಜಮೀನುಗಳನ್ನು ದೇವರ ಪೂಜೆ, ಜಾತ್ರೆ ಮೊದಲಾದ ಖರ್ಚಿನ ಸಲುವಾಗಿ ಇನಾಮಾಗಿ ಕೊಟ್ಟಿದ್ದಾರೆ. ಈ ದೇವರ ಭಕ್ತರು ಜಂಗಮಶೆಟ್ಟರ ಮನೆತನದವರು.

**ಹಲಗಣಿ:**— ವಿಜಾಪುರದಿಂದ ನೈಋತ್ಯಕ್ಕೆ ೧೮ ಮೈಲಿನ ಮೇಲೆ ಅದೆ. ಈ ಊರಲ್ಲಿ ಹನುಮಂತದೇವರ ಗುಡಿ ಅದೆ.

**ಕಾಖಂಡಕಿ:**— ವಿಜಾಪುರದಿಂದ ದಕ್ಷಿಣಕ್ಕೆ ೧೬ ಮೈಲಿನ ಮೇಲೆ ಅದೆ. ಇಲ್ಲಿ ಮಹಿಪತಿಸ್ವಾಮಿಗಳ ವೃಂದಾವನ (ಸಮಾಧಿ) ಇರುವದು. ಇದರ ಆರಾಧನೆಯು ಮಾರ್ಗಶೀರ್ಷ ಪ್ರತಿಪದೆಗೆ ಆಗುತ್ತದೆ. ಈ ಮಹಿಪತಿ ಸ್ವಾಮಿಗಳು ಮೊದಲು ಅಥಣಿ ತಾಲೂಕಿನಲ್ಲಿರುವ ಐಗಳಿ ಗ್ರಾಮದ ಕುಲಕರ್ಣಿಯರಿದ್ದರು. ಇವರು ಪ್ರಬಲರಾಗಿ ವಿಜಾಪುರದಲ್ಲಿ ಔರಂಗಜೇಬ ಬಾದಶಹನಿದ್ದಾಗ ಅವನ ಮಂತ್ರಿಯಾಗಿದ್ದರು. ಮುಂದೆ ಮುಪ್ಪಿನ ಕಾಲಕ್ಕೆ ವೈರಾಗ್ಯ ಧಾರಣಮಾಡಿದರು. ಈ ಊರಲ್ಲಿ ಅವರ ಮಹತ್ವ ನಡೆಯ ಹತ್ತಿತು. ಊರ ಹೊರಗೆ ದಸ್ತಗೀರನೆಂಬ ಪೀರನ ದರ್ಗಾ ಇದ್ದು, ಪ್ರತಿ ವರುಷ ಉರುಸು ನಡೆಯುತ್ತದೆ. ಇಲ್ಲಿ ಒಕ್ಕಲತನದ ಕ್ಲಾಸು ಅದೆ.

**ಸಾರವಾಡ:**—ಇದು ವಿಜಾಪುರದಿಂದ ನೈಋತ್ಯಕ್ಕೆ ೧೦ ಮೈಲಿನ ಮೇಲೆ ಅದೆ. ಇಲ್ಲಿ ಭಾಸ್ಕರಸ್ವಾಮಿ ಎಂಬ ಸತ್ಪುರುಷರಿದ್ದರು. ಇವರಲ್ಲಿ ಮಹಿಪತಿಸ್ವಾಮಿಗಳ ಹೆಂಡತಿಯಾದ ತಿಮ್ಮವ್ವ ಎಂಬವಳು ಸೇವೆ ಮಾಡುತ್ತಿದ್ದಳು. ಭಾಸ್ಕರಸ್ವಾಮಿಗಳು ಮಹಿಪತಿಸ್ವಾಮಿಗಳವರಿಗೆ ಉಪದೇಶ ಮಾಡಲು, ಅವರು ವಿಜಾಪುರದ ಮಂತ್ರಿ ಕೆಲಸ ಬಿಟ್ಟು ವೈರಾಗ್ಯಧಾರಣ ಮಾಡಿ ಕಾಖಂಡಕಿಯಲ್ಲಿ ವಾಸಮಾಡಹತ್ತಿದರು.

**ಮಮದಾಪುರ:**—ವಿಜಾಪುರದ ನೈಋತ್ಯಕ್ಕೆ ೨೦ ಮೈಲಿನ ಮೇಲೆ ಅದೆ. ಈ ಊರಿಗೆ ಈ ಹೆಸರು ಬರಲು ಕಾರಣವೇನಂದರೆ—ವಿಜಾಪುರ ಮಹಮೂದಶಹನಿಗೆ ಕೊಂಕಣವನ್ನು ನೋಡುವ ಅಪೇಕ್ಷೆಯು ಹುಟ್ಟಿದ್ದರಿಂದ ಅವನ ಮಂತ್ರಿಯಾದ ಮುರಾರಿಪಂತನು ಈ ಊರು ಇದ್ದ ಸ್ಥಳದಲ್ಲಿ ಎರಡು ಹೊಸ ಕೆರೆಗಳನ್ನು ಕಟ್ಟಿಸಿ, ಕೊಂಕಣದಲ್ಲಿದ್ದ ಗಿಡಗಳನ್ನೂ ಪೈರುಗಳನ್ನೂ ಸ್ವಲ್ಪ ದಿವಸಗಳಲ್ಲಿ ಬೆಳಿಸಿ ಬಾದಶಹನಿಗೆ ತೋರಿಸಲಾಗಿ, ಅರಸನು ಸಂತುಷ್ಟನಾಗಿ ಅಲ್ಲಿ ಒಂದು ಊರನ್ನು ಕಟ್ಟಿಸಿ, ಅದಕ್ಕೆ ತನ್ನ ಹೆಸರನ್ನು ಅಂದರೆ ಮಹಮ್ಮದಪುರವೆಂದು ಹೆಸರಿಟ್ಟನು. ಅದು ಈಗ ಮಮದಾಪುರವೆಂದು ಕರೆಯಲ್ಪಡುವದು. ಈ ಕೆರೆಗಳಿದ್ದಲ್ಲಿ ಮೊದಲು ನಾಲ್ಕೈದು ಹಳ್ಳಿಗಳು ಇದ್ದವು. ಅವು ಕೆರೆಗಳಿಂದ ಕಿತ್ತಿದವು. ಇವುಗಳಲ್ಲಿ ಒಂದು ಮಾತ್ರ ದೊಡ್ಡದುಂಟು. ಈ ಕೆರೆಗಳಲ್ಲಿ ಈಗಲೂ ಭತ್ತದ ಗದ್ದೆಗಳನ್ನು ಮಾಡಿರುವರು. ಭೂಮಿಯು ಫಲವತ್ತಾದದು. ಬಿಳಿಜೋಳ ಬಹು ಚನ್ನಾಗಿ ಬೆಳೆಯುವದು.

ವಿಜಾಪುರ ಜಿಲ್ಹೆಯಲ್ಲಿ ಇದರಷ್ಟು ದೊಡ್ಡ ಕೆರೆಯು ಮತ್ತೆಲ್ಲಿಯೂ ಇಲ್ಲ. ಈ ಎರಡೂ ಕೆರೆಗಳಲ್ಲಿ ಸನ್ ೧೬೩೩ರಲ್ಲಿ ಮಹಮ್ಮದಶಹನು ಬರೆಯಿಸಿದ ಲಿಪಿಗಳುಂಟು. ಆ ಲಿಪಿಗಳಲ್ಲಿ ಈ ಕೆರೆಗಳಿಗೆ ೫೦ ಸಾವಿರ ಹೊನ್ನು ವೆಚ್ಚವಾಯಿತೆಂದು ಬರೆದಿರುವರು. ಈ ಊರಲ್ಲಿ ಮಾರುತಿ, ಸಿದ್ಧೇಶ್ವರ, ವಿಠೋಬಾ ಮೊದಲಾದ ಹತ್ತೆಂಟು ದೇವಸ್ಥಾನಗಳಿರುವವು. ಕಮಾಲಪಾಚ್ಛಾನೆಂಬ ಪೀರನ ಗೋರಿಯು ಪೇಟೆಯಲ್ಲುಂಟು. ಇಲ್ಲಿ ಉರಟ ಖಾದೀ ಬಟ್ಟೆಗಳು ತಯೊರಾಗುತ್ತವೆ.

**ಜೈನಾಪುರ :**—ವಿಜಾಪುರ ದಕ್ಷಿಣಕ್ಕೆ ೨೫ ಮೈಲಿನ ಮೇಲೆ ಕೃಷ್ಣೆಯ ದಂಡೆಯಲ್ಲಿದೆ. ಇದು ದೇಸಾಯರ ಇನಾಮು ಗ್ರಾಮು. ಇಲ್ಲಿ ಪೂರ್ವ ಕಾಲದ ದೇವಾಲಯಗಳು ಮೂರು ಅವೆ. ಪೂರ್ವಕಾಲದಲ್ಲಿ ಜೈನವಸ್ತಿ ಇತ್ತೆಂದು ಇದಕ್ಕೆ ಜೈನರಪುರವೆಂದು ಹೆಸರಿತ್ತು. ಈಗ ಜೈನಾಪುರವೆಂದು ಅನ್ನುವರು.

**ಪ್ರಶ್ನೆಗಳು:**—ವಿಜಾಪುರ ತಾಲೂಕಿನ ಮೇರೆಗಳಾವವು? ತಾಲೂಕು ಭಿವ್ರ ವಾಗಲು ಕಾರಣವೇನು? ದೊಡ್ಡ ಊರುಗಳಾವವು? ಜಾತ್ರೆಗಳು ಎಲ್ಲೆಲ್ಲಿ ಆಗುತ್ತವೆ? ಡೋಣಿ ನದಿಯ ದಂಡೆಯಲ್ಲಿಯ ಊರುಗಳು ಯಾವವು? ವಿಜಾಪುರ ವಿಷಯಕ್ಕೆ ಗೊತ್ತಿದ್ದ ಸಂಗತಿ ಹೇಳಿರಿ? ಬಬಲೇಶ್ವರವೆಂದು ಯಾಕೆ ಅನ್ನುವರು? ಮಮದಾಪುರ ಸಂಬಂಧ ಗೊತ್ತಿದ್ದ ಸಂಗತಿ ಹೇಳಿರಿ? ಭೂತನಾಳ ಕೆರೆ ಎಲ್ಲಿದೆ? ಅದರ ಉಪಯೋಗ ವೇನು?

---

# ಇಂಡಿ ತಾಲೂಕು

**ಮೇರೆಗಳು :**—ಉತ್ತರಕ್ಕೆ ಭೀಮಾ ನದಿಯು, ಆದರಾಚೆಯಲ್ಲಿ ಸೊಲ್ಲಾಪುರ ಜಿಲ್ಹೆ, ಅಕ್ಕಲಕೋಟ ಸಂಸ್ಥಾನ; ಪೂರ್ವಕ್ಕೆ ಸಿಂದಗಿ ತಾಲೂಕು, ಮೊಗಲಾಯಿ ಇಲಾಖೆ; ದಕ್ಷಿಣಕ್ಕೆ ವಿಜಾಪುರ ತಾಲೂಕು; ಪಶ್ಚಿಮಕ್ಕೆ ಜತ್ತ ಜಹಾಗೀರ, ಸಾಂಗಲಿ ಸಂಸ್ಥಾನ, ಮಂಗಳವೇಢೆ ತಾಲೂಕು ಉಂಟು.

**ಕ್ಷೇತ್ರಫಲ :**—ಈ ತಾಲೂಕು ಜಿಲ್ಹೆಯ ಉತ್ತರಭಾಗದಲ್ಲಿ ಭೀಮಾ ನದಿಯ ದಕ್ಷಿಣಭಾಗದಲ್ಲಿರುತ್ತದೆ. ಇದರಲ್ಲಿ ಸರಕಾರಿ ಹಳ್ಳಿಗಳು ೧೦೮, ದುಮಾಲಿ ಹಳ್ಳಿಗಳು ೧೮ ಇರುತ್ತವೆ. ಕ್ಷೇತ್ರವು ೮೭೧ ಚಚ್ಚೌಕು ಮೈಲು, ಜನಸಂಖ್ಯೆ ೨,೦೩,೧೯೦, ತೆರಿಗೆ ೭೩,೮೬೬ ರೂ. ಗಳು.

**ಭೂಮಿಯ ಸ್ವರೂಪ :**—ಭೂಮಿ ಬೈಲಾದದ್ದು. ಗಿಡಗಳಿಲ್ಲ. ದಕ್ಷಿಣಭಾಗದಲ್ಲಿ ಮಾತ್ರ ಸ್ವಲ್ಪ ಗುಡ್ಡಗಳಿವೆ. ಭೀಮಾತೀರದ ಪ್ರದೇಶವು

ಮಾತ್ರ ಬಹು ಬೆಳೆಯುಳ್ಳದ್ದು. ದಕ್ಷಿಣಭಾಗದಲ್ಲಿ ಜನವಸತಿಯು ಹೆಚ್ಚು ದಟ್ಟಾಗಿರುವದು. ಎಲ್ಲ ಕಡೆಗೂ ವಾಡಿಕೆಯಾಗಿ ಎರೆಭೂಮಿಯು. ದಿನ್ನೆಗಳಲ್ಲಿ ಮಾತ್ರ ಗರಸು. ಇಲ್ಲಿ ಕಬ್ಬು, ಬಾಳೆ, ಕಾಯಿಪಲ್ಲೆಗಳ ತೋಟಗಳಿರುವವು.

**ಹವೆ, ಮಳೆ, ನೀರು** :—ಹವೆಯು ಅತ್ಯುಷ್ಣವು. ಎಪ್ರೀಲ, ಮೇ ತಿಂಗಳಲ್ಲಿ ಶಕೆಯು ೧೧೮ ಅಂಶದ ವರೆಗೆ ಇರುತ್ತದೆ. ಬೇಸಿಗೆಯಲ್ಲಿ ಶಕೆಯಿಂದ, ಮಳೆಗಾಲದಲ್ಲಿ ಶೀತದಿಂದ ಚಳಿಜ್ವರ ಬರುವದು. ಚಳಿಗಾಲದಲ್ಲಿ ಮಾತ್ರ ಹವೆಯು ಆರೋಗ್ಯಕರವಾಗಿರುವದು. ಇಲ್ಲಿ ಮಳೆಯು ಉತ್ತರದ ಕಡೆಗೆ ಅನಿಯಮಿತ. ಇಲ್ಲಿ ೮ರಿಂದ ೪೫ ಇಂಚಿನ ವರೆಗೆ ಸರಾಸರಿ ೨೭ ಇಂಚು ಬೀಳುವದು. ನೀರಿನ ಕೊರತೆ ಇಲ್ಲ. ಭೀಮಾನದಿಗೆ ಕೂಡುವ ಹಳ್ಳಗಳು ವರ್ಷದಲ್ಲಿ ಹನ್ನೆರಡು ತಿಂಗಳೂ ಹರಿಯುತ್ತವೆ. ಹಳ್ಳಗಳಿಲ್ಲದಲ್ಲಿ ಭಾವಿ ನೀರಿನಿಂದ ತಕ್ಕಮಟ್ಟಿಗೆ ತೋಟಪಟ್ಟಿಗಳನ್ನು ಮಾಡಿಕೊಳ್ಳುವರು. ನೀರಿನ ಅರಬು ಆಗುವಂತೆ ಇಲ್ಲ.

**ದೊಡ್ಡ ಊರುಗಳೂ ಸಾಲೆಗಳಿದ್ದ ಊರುಗಳೂ**:—ಇಂಡಿ, ಹೊರ್ತಿ, ತಾಂಬೆ, ಅಥರ್ಗಾ, ಶಿರಸಾಡ, ಸಾಲೊಟಗಿ, ಸಾತಲಗಾಂವ, ಬೇವನೂರು, ಭತ್ತಗುಣಕಿ, ಅಂಜುಟಗಿ, ಬಲ್ಲೊಳ್ಳಿ, ನಿಂಬರಗಿ, ಬರಡೋಲ, ಚಡಚಣ, ಉಮ್ರಜಿ, ನಿವರಗಿ, ಹಲಸಂಗಿ, ಬರಗುಡಿ, ಅಗರಖೇಡ, ಮಣ್ಣೂರ, ಭೂಯಾರ, ಖೇಡಗಿ, ರೋಡಗಿ, ಮಸಳಿಖುರ್ದ, ಜಗಜೀವನ.

**ಸಂತೆಯಾಗುವ ಊರುಗಳು**:—ಇಂಡಿ, ತಾಂಬೆ, ಚಡಚಣ, ಹಲಸಂಗಿ.

**ಜಾತ್ರೆಯಾಗುವ ಊರುಗಳು** :—ನಿಂಬರಗಿಯಲ್ಲಿ **ಹಣಮಂತದೇವರ** ಜಾತ್ರೆಯು ಚೈತ್ರಮಾಸದಲ್ಲಿ ಆಗುವದು. ಹೊರ್ತಿಯಲ್ಲಿ **ಸಿದ್ಧರಾಮೇಶ್ವರ** ಜಾತ್ರೆಯಾಗುವದು. ಇಂಡಿಯಲ್ಲಿ **ಶ್ರೀಕಂಠೇಶ್ವರ ದೇವರ** ಜಾತ್ರೆಯಾಗುವದು. ಸಾಲೊಟಗಿಯಲ್ಲಿ **ಶಿವಯೋಗೀಶ್ವರ ದೇವರ** ಜಾತ್ರೆಯಾಗುವದು. ಅಗರಖೇಡವು **ಆದ್ಯರೆಂಬ** ಬ್ರಾಹ್ಮಣರಿಗೆ

ಅಗ್ರಹಾರವಾಗಿದೆ. ಧೂಳಖೇಡದಲ್ಲಿ **ಶಂಕರಲಿಂಗದೇವರ** ಜಾತ್ರೆಯು ಪ್ರಸಿದ್ಧ. ಈ ಊರು **ಶಂಕರಾಚಾರ್ಯರ ಮಠದ** ಇನಾಮು ಗ್ರಾಮವು.

**ಪೋಸ್ಟ ಇದ್ದ ಊರುಗಳು**:—ಇಂಡಿ, ಅಗರಖೇಡ, ಹೊರ್ತಿ, ಹಲಸಂಗಿ, ನಿಂಬರಗಿ, ತಾಂಬೆ, ಚಡಚಣ, ಭೂಯಾರ, ಸಾಲೊಟಗಿ, ಭತ್ತಗುಣಕಿ, ನಿಂಬಾಳ, ಅಥರ್ಗಾ.

**ಪೋಲೀಸ ಗ್ಯಾಟ ಇದ್ದ ಊರುಗಳು**:—ಇಂಡಿಯಲ್ಲಿ ಠಾಣಾ ಪೋಸ್ಟ, ಚಡಚಣ, ಹಲಸಂಗಿ, ತಾಂಬೆ, ಅಗರಖೇಡ, ಹೊರ್ತಿ.

**ರೇಲ್ವೆಸ್ಟೇಶನ್ ಇದ್ದ ಊರುಗಳು**:—ತಡವಲ, ಲಚ್ಯಾಣ, ಇಂಡಿ, ನಿಂಬಾಳ. (ಲಚ್ಯಾಣವು ಅಕ್ಕಲಕೋಟ ಸಂಸ್ಥಾನದ ಪೈಕಿ ಗ್ರಾಮವು.)

**ನದಿಗಳು**:—ಭೀಮಾ ನದಿಯು ಈ ತಾಲೂಕಿನ ಉತ್ತರ ಮೇರೆಯಾಗಿ ಹರಿದು ಸಿಂದಗಿ ತಾಲೂಕಿನಲ್ಲಿ ಸೇರಿದೆ. ಇದರ ದಂಡೆಯ ಮೇಲಿದ್ದ ಊರುಗಳು:—ಉಮ್ರಜಿ, ಧೂಳಖೇಡ, ಅಗರಖೇಡ, ಮಣ್ಣೂರ, ಭೂಯಾರ, ಖೇಡಗಿ, ರೋಡಿಗಿಗಳುಂಟು.

**ಕೆರೆ**:—ಸಂಗೋಗಿಯಲ್ಲಿ ಕೆರೆ ಉಂಟು.

## ಲೈನಮಾರ್ಗಗಳು

**ಇಂಡಿಯಿಂದ ಪಂಢರಪುರ ಮಾರ್ಗ**: - ಬೇವನೂರ, ಅಂಜುಟಗಿ, ಬರಡೋಲ, ಚಡಚಣ, ಶಿರಡೋಣಗಳ ಮೇಲಿಂದ ಹೋಗಿದೆ.

**ಇಂಡಿಯಿಂದ ಸೊಲ್ಲಾಪುರ ಮಾರ್ಗ**:—ಗುಣಕಿ, ಹಲಸಂಗಿ, ಧೂಳಖೇಡಗಳ ಮೇಲಿಂದ ಹೋಗಿದೆ.

**ಇಂಡಿಯಿಂದ ಅಕ್ಕಲಕೋಟೆ ಮಾರ್ಗ**:—ಮಣ್ಣೂರ ಮೇಲಿಂದ ಹೋಗಿದೆ.

**ಇಂಡಿಯಿಂದ ಆಲಮೇಲ ಮಾರ್ಗ**:—ಸಾಲೊಟಗಿ ಮೇಲಿಂದ ಹೋಗಿದೆ.

ಲಿಂಗವೂ ಉಂಟು. ಹನುಮಂತನ ಮೂರ್ತಿಯು ಕಲ್ಲಿನ ಮೇಲೆ ಮೂಡಿದ್ದು ಅದೆ. ಈ ಗುಡಿಯನ್ನು **ಧನಾಯಿ** ಎಂಬ ಕುರುಬನ ಹೆಂಗಸು ಕಟ್ಟಿಸಿದಳೆಂದು ಹೇಳುತ್ತಾರೆ.

ಧನಾಯಿಯ ಆಕಳು ಪ್ರತಿನಿತ್ಯ ಒಂದು ಹುತ್ತಿನ ಮೇಲೆ ಹಾಲು ಕರೆದು ಬರಿ ಕೆಚ್ಚಲವಾಗಿ ಮನೆಗೆ ಬರುತ್ತಿದ್ದುದನ್ನು ನೋಡಿ ಧನಾಯಿಯ ಹೆಂಗಸು ಆ ಆಕಳನ್ನು ಮನೆಯಲ್ಲಿ ಕಟ್ಟಿದಳು. ಅದೇ ದಿವಸ ರಾತ್ರಿ ಅವಳಿಗೆ ಸ್ವಪ್ನ ಬಿದ್ದುದೇನಂದರೆ—ಆ ಹುತ್ತಿನ ಮೇಲೆ ಗುಡಿಯನ್ನು ಕಟ್ಟಿಸಿ, ಒಂಬತ್ತು ತಿಂಗಳ ವರೆಗೆ ಬಾಗಿಲ ಇಕ್ಕಿಬಿಡೆಂದು ಸ್ವಪ್ನ ಬಿದ್ದಿತು. ಆಕೆಯು ಕೂಡಲೇ ಮರುದಿನ ಗುಡಿಯನ್ನು ಕಟ್ಟಿಸಿ ಕೆಲವು ತಿಂಗಳ ಬಾಗಿಲ ಇಕ್ಕಿ ಬಳಿಕ ಸ್ತ್ರೀಸ್ವಭಾವ(ಚಂಚಲ) ಮೂಲಕವಾಗಿ ೯ ತಿಂಗಳ ಪೂರ್ವದಲ್ಲಿಯೇ ಬಾಗಿಲ ತೆರೆದಳು. ಆಗ ಗುಡಿಯೊಳಗಿನ ಮೂರ್ತಿಯು ಅರೇವಾಸಿ ಹುಟ್ಟಿತು. ಅದು ಅಷ್ಟಕ್ಕೆ ನಿಂತಿತು.

**ಸಾಲೋಟಗಿ** :— ಇಂಡಿಯ ಆಗ್ನೆಯಕ್ಕೆ ೬ ಮೈಲಿನ ಮೇಲೆ ಅದೆ. ಇಲ್ಲಿ **ಶಿವಯೋಗೀಶ್ವರನ** ಪುರಾತನ ಗುಡಿಯು ದೊಡ್ಡದಿರುತ್ತದೆ. ಈ ಗುಡಿಗೆ ಶಿಖರವಿಲ್ಲ, ನಾಲ್ಕು ಗುಮುಟಗಳು ಮಾತ್ರ ಅವೆ. ಈ ಗುಡಿಯನ್ನು ಬೇದರ ಪಟ್ಟಣದ ಚಾಲುಕ್ಯ ಅರಸರು ಕಟ್ಟಿಸಿದಂತೆ ಕಾಣುತ್ತದೆ. ಆ ಅರಸರು ಕೊಟ್ಟ ಇನಾಮು ದೇವರಿಗೆ ಈಗಲೂ ನಡೆಯುತ್ತದೆ. ಈ ಗುಡಿಯೊಳಗೆ ಹಿಂದೂ ಜನರ ಹೊರತಾಗಿ ಬೇರೆ ಜಾತಿಯವರಿಗೆ ಪ್ರವೇಶವಿಲ್ಲ. ಈ ದೇವರ ಜಾತ್ರೆಯು ಚೈತ್ರ ಶುದ್ಧ ಹುಣ್ಣಿವೆಯ ದಿವಸ ಆಗುತ್ತದೆ. ಉತ್ಸವ ಕಾಲಕ್ಕೆ ಮಾತ್ರ ಕೀಳು ಜಾತಿಯ ಜನರೂ ಸಹ ಪ್ರವೇಶ ಮಾಡುವರು. ಆಗ ಎಲ್ಲ ಜಾತಿಯವರು ಕೂಡಿಯೇ ಊಟಮಾಡುವರಂತೆ. ಈಗ ಕಡಿಮೆಯಾಗಿದೆ. ಈ ಗುಡಿಯೊಳಗಿನ ಲಿಪಿಯ ಕಂಬವನ್ನು ತಂದು ಅಗಸಿಯಲ್ಲಿ ಇಟ್ಟಿರುವರು. ಅದರಲ್ಲಿ ರಾಷ್ಟ್ರಕೂಟದ ನಾಲ್ಕನೆಯ ಕೃಷ್ಣರಾಜನ ಆಳಿಕೆಯಲ್ಲಿ ಅಂದರೆ ಇಸ್ವಿ ಸನ್ ೯೪೭ನೆಯ ವರುಷ ಕರ್ಣಪುರಿ ಪ್ರಾಂತದಲ್ಲಿ **ಪವಿಟ್ಟಗೆ** ಎಂಬಲ್ಲಿ ಒಂದು ವಿದ್ಯಾಲಯವನ್ನು ಸ್ಥಾಪಿಸಿದ ಲೇಖವುಂಟು. ಆ ವಿದ್ಯಾಲಯಕ್ಕೆ ಕೆಲವು ಭೂಮಿಯನ್ನು

ಇನಾಮಾಗಿ ಕೊಟ್ಟದ್ದು ಬರೆದಿದೆ. ಪವಿಟ್ಟಿಗೆಗೆ ಈಗ ಸಾಲೊಟಗಿ ಅಂತಾ ಕರೆಯುತ್ತಾರೆ.

**ಹೊರ್ತಿ:**— ಇಂಡಿಯ ನೈಋತ್ಯಕ್ಕೆ ೧೨ ಮೈಲಿನ ಮೇಲೆ ಅದೆ. ಇಲ್ಲಿ ಸಿದ್ಧೇಶ್ವರ, ಮಲ್ಲಿಕಾರ್ಜುನ ಮುಂತಾದ ನಾಲ್ಕು ದೇವಾಲಯಗಳು ಉಂಟು.

**ಚಡಚಣ:**— ಇಂಡಿಯಿಂದ ೧೩ ಮೈಲಿನ ಮೇಲೆ ವಾಯುವ್ಯಕ್ಕೆ ಅದೆ. ಇಲ್ಲಿ ನೇಕಾರಿಕೆ ಉದ್ಯೋಗ ಹೆಚ್ಚು. ಬಣ್ಣದ ಕೆಲಸದ ಸಾಮಾನುಗಳು ತಯಾರಾಗುತ್ತವೆ. ಇದರ ಸಮೀಪಕ್ಕೆ ದೊಡ್ಡ ಊರುಗಳಿಲ್ಲದ್ದರಿಂದ ದನಗಳ ಹಾಗು ಇನ್ನಿತರ ಸಂತೆಯು ದೊಡ್ಡ ಪ್ರಮಾಣದಿಂದ ನಡೆಯುತ್ತದೆ.

ಪ್ರಶ್ನೆಗಳು:— ಈ ತಾಲೂಕಿನ ಉತ್ತರಭಾಗವಲ್ಲಿ ಯಾವ ನದಿ ಹರಿದಿದೆ? ಈ ತಾಲೂಕಿನ ಮೇರೆ ಹೇಳಿರಿ? ಭೂಮಿಯ ಸ್ವರೂಪ ಹೇಳಿರಿ? ಇಂಡಿ ತಾಲೂಕಿನಲ್ಲಿ ಜಾತ್ರೆಯಾಗುವ ಊರುಗಳಾವವು? ಪೋಸ್ಟ ಇದ್ದ ಊರುಗಳಾವವು? ಲಚ್ಯಾಣವು ಯಾವ ಸಂಸ್ಥಾನಕ್ಕೆ ಸೇರಿರುತ್ತದೆ? ಉಗಿಬಂಡಿಯ ಸ್ಟೇಶನ್ನುಗಳಾವವು? ಇಂಡಿಯ ವಿಷಯಕ್ಕೆ ಗೊತ್ತಿದ್ದ ಸಂಗತಿ ಹೇಳಿರಿ? ಅಗ್ರಖೇಟಕವೆಂದು ಯಾವ ಊರಿಗೆ ಅನ್ನುವರು? ನಿಂಬರಗಿಯಲ್ಲಿ ಹನುಮಂತ ದೇವರ ಮೂರ್ತಿಯು ಆರೆವಾಸಿ ಹುಟ್ಟಲು ಕಾರಣ ವೇನು? ಸಾಲೊಟಗಿ ಊರ ವಿಷಯಕ್ಕೆ ಗೊತ್ತಿದ್ದ ಸಂಗತಿ ಹೇಳಿರಿ?

---

## ಸಿಂದಗಿ ತಾಲೂಕು

**ಮೇರೆಗಳು:**— ಉತ್ತರಕ್ಕೆ ಮತ್ತು ಪೂರ್ವಕ್ಕೆ ಮೊಗಲಾಯಿ ಇಲಾಖೆ; ದಕ್ಷಿಣಕ್ಕೆ ಮುದ್ದೇಬಿಹಾಳ, ಬಾಗೇವಾಡಿ ತಾಲೂಕುಗಳು; ಪಶ್ಚಿಮಕ್ಕೆ ಇಂಡಿ, ವಿಜಾಪುರ ತಾಲೂಕುಗಳುಂಟು.

**ಕ್ಷೇತ್ರಫಲ:**— ಈ ತಾಲೂಕು ವಿಜಾಪುರ ಜಿಲ್ಹೆಯ ಈಶಾನ್ಯ ಮೂಲೆಯಲ್ಲಿ ಭೀಮಾ ನದಿಯ ದಕ್ಷಿಣಕ್ಕೆ ಇರುತ್ತದೆ. ಈ ತಾಲೂಕಿನಲ್ಲಿ ಸರಕಾರಿ ಹಳ್ಳಿಗಳು ೧೩೩, ದುಮಾಲಿ ಹಳ್ಳಿಗಳು ೧೪ ಉಂಟು. ಕ್ಷೇತ್ರವು ೮೧೨ ಚೌರಸ ಮೈಲು; ಜನಸಂಖ್ಯೆಯು ೧,೦೬,೮೮೧; ತೆರಿಗೆಯು ೮೬,೨೪೭ ರೂಪಾಯಿಗಳುಂಟು.

**ಭೂಮಿಯ ಸ್ವರೂಪ**:— ಈ ತಾಲೂಕಿನ ಉತ್ತರ ದಿಕ್ಕಿನ ಪಟ್ಟಿ ಅಂದರೆ ಭೀಮಾ ನದಿಯ ತೀರದ ಭೂಮಿಯು ಮತ್ತು ದಕ್ಷಿಣ ಭಾಗದಲ್ಲಿ ಅಂದರೆ ಡೋಣಿಯ ತೀರದ ಭೂಮಿಯು ಬೆಳೆಯುಳ್ಳದ್ದು. ಉಳಿದ ಭಾಗವೆಲ್ಲ ಸಾಧಾರಣ ಬೈಲುಪ್ರದೇಶವಿದ್ದು, ಗುಡ್ಡಗಳಿಲ್ಲ. ಭಾವಿಗಳ ಹಾಗು ಡೋಣಿ ನದಿಯ ನೀರಿನಿಂದ ತೋಟಗಳನ್ನು ಮಾಡುವರು. ನೇಕಾರಿಕೆ ಉದ್ಯೋಗ ಕಡಿಮೆ, ಒಕ್ಕಲತನವೇ ಇಲ್ಲಿಯ ಮುಖ್ಯ ಉದ್ಯೋಗವು.

**ಹವೆ, ಮಳೆ, ನೀರು**:— ಬೇಸಿಗೆಯಲ್ಲಿ ಶಕೆ ಹೆಚ್ಚು. ಆದರೆ ಅದು ದಕ್ಷಿಣದಲ್ಲಿ ಸ್ವಲ್ಪ ಮಟ್ಟಿಗೆ ಕಡಿಮೆ ಇರುತ್ತದೆ. ಮಳೆಯು ಆಲಮೇಲದಲ್ಲಿ ಹೆಚ್ಚು ಬೀಳುತ್ತದೆ. ಈ ತಾಲೂಕಿನಲ್ಲಿ ಮಳೆಯು ೧೨ ರಿಂದ ೩೪ ಇಂಚು ಅಂದರೆ ಸರಾಸರಿ ೨ ಇಂಚು ಬೀಳುವದು. ಬೇಸಿಗೆಯಲ್ಲಿ ಸಹ ಹರಿಯುವ ಹಳ್ಳಗಳು ೨-೩ ಇರುತ್ತವೆ.

**ನದಿಗಳು**:— ಭೀಮಾನದಿಯು ಈ ತಾಲೂಕಿನ ಉತ್ತರ ಮೇರೆಯಲ್ಲಿ ಹರಿದು ಮೊಗಲಾಯಿಯಲ್ಲಿ ಸೇರಿದೆ. ಇದರ ಧಡದಲ್ಲಿದ್ದ ಊರುಗಳು— ಕಡಣಿ, ಮದನಹಳ್ಳಿ, ಬಾಡಗಿಹಾಳ, ದೇವಣಗಾವಿ, ಕುಮಸಿ, ಸಿರಸಂಗಿ.

**ಡೋಣಿ**:— ಈ ತಾಲೂಕಿನ ದಕ್ಷಿಣಭಾಗದಲ್ಲಿ ಹರಿದು ಮುದ್ದೇಬಿಹಾಳ ತಾಲೂಕಿನಲ್ಲಿ ಸೇರಿದೆ. ಇದರ ಧಡದಲ್ಲಿದ್ದ ಊರುಗಳು— ಕೊಂಡಗೂಳಿ, ಹಂಚಲಿ, ಬೀಬೀ ಇಂಗಳಿಗಿ.

**ದೊಡ್ಡ ಊರುಗಳೂ ಸಾಲೆಗಳಿದ್ದ ಊರುಗಳೂ**:— ಸಿಂದಗಿ, ಮೊರಟಗಿ, ದೇವರನಾವದಗಿ, ಕುಮಸಿ, ದೇವಣಗಾಂವಿ, ಮದನಹಳ್ಳಿ, ಕಡಣಿ, ಆಲಮೇಲ, ಬಳಗಾನೂರ, ಸುರಗೇಹಳ್ಳಿ, ಚಾಂದಕವಠೆ, ರೂಗಿ, ಮುಳ್ಳಸಾವಳಗಿ, ಪಡಗಾನೂರ, ದೇವರಹಿಪ್ಪರಗಿ, ಕೊಂಡಗೂಳಿ, ಕಲಕೇರಿ, ತಿಳಗೂಳ, ಬೀಬೀಇಂಗಳಗಿ, ಬಿಂಜಲಭಾವಿ, ಅಸ್ಕಿ, ಕೋರವಾರ, ಕನ್ನೊಳ್ಳಿ, ಹಂಚಲಿ, ಮಲಘಾಣ, ಗೋಲಗೇರಿ, ಬಂಟನೂರ, ಯಂಕಂಚಿ, ಜಾಲವಾದಿ, ಆಲಗೂರ.

**ಸಂತೆಯಾಗುವ ಊರುಗಳು:**—ಸಿಂದಗಿ, ಆಲಮೇಲ, ಹಿಪ್ಪರಗಿ, ಕೋರವಾರ, ಕಲಕೇರಿ, ಗೋಲಗೇರಿ, ಬಂಟನೂರ, ಮೊರಟಗಿ,ಮಲಘಾಣ, ಚಾಂದಕವಠೆ.

**ಜಾತ್ರೆಯಾಗುವ ಊರುಗಳು:**— ಗೋಲಗೇರಿ (ಗೊಲ್ಲಗೇರಿ) ಯಲ್ಲಿ ಗೊಲ್ಲಾಳೇಶ್ವರ ಜಾತ್ರೆ. ಕೋರವಾರದಲ್ಲಿ ಹನುಮಂತ ದೇವರ ಉತ್ಸವ. ಹಿಪ್ಪರಗಿಯಲ್ಲಿ ಮಲ್ಲಯ್ಯನ ಜಾತ್ರೆ. ಮಲಘಾಣದಲ್ಲಿ ಶರಣಬಸಪ್ಪನ ಜಾತ್ರೆ. ಆಲಮೇಲದಲ್ಲಿ ಗಾಲಿಲ ಸಾಹೇಬನ ಉರುಸು. ಸಿಂದಗಿಯಲ್ಲಿ ನೀಲಗಂಗಮ್ಮನ ಜಾತ್ರೆ. ಕಲಕೇರಿಯಲ್ಲಿ ಮಡಿವಾಳಪ್ಪನ ಜಾತ್ರೆಯಾಗುತ್ತದೆ.

**ಪೋಸ್ಟ ಆಫೀಸು ಇದ್ದ ಊರುಗಳು:**—ಸಿಂದಗಿ, ಹಿಪ್ಪರಗಿ, ಆಲಮೇಲ, ಮೊರಟಗಿ, ಕೊರವಾರ, ಕಲಕೇರಿ, ಕನ್ನೊಳ್ಳಿ, ಹಂಚಲಿ.

**ಪೋಲೀಸಗ್ಯಾಟ ಇದ್ದ ಊರುಗಳು:**—ಸಿಂದಗಿಯಲ್ಲಿ ಠಾಣಾ ಪೋಸ್ಟ, ದೇವಣಗಾಂವಿ, ಆಲಮೇಲ, ಮೊರಟಗಿ, ಆಲಗೂರು, ಹಿಪ್ಪರಗಿ, ಸುರಗಿಹಳ್ಳಿ.

## ಲೈನ ಮತ್ತು ರೇಲ್ವೆ ಮಾರ್ಗಗಳು

ಈ ತಾಲೂಕಿನಲ್ಲಿ ರೇಲ್ವೆ ಮಾರ್ಗವೇ ಇಲ್ಲ. ಆದರೆ ಲೈನಮಾರ್ಗ ಮಾತ್ರ ಬಹಳ ಉಂಟು. ಅವು ಯಾವವೆಂದರೆ:—

**ಹಿಪ್ಪರಗಿಯಿಂದ ಮೊಗಲಾಯಿ ಕಡೆಗೆ ಹೋಗುವ ಮಾರ್ಗ**-ಕನ್ನೊಳ್ಳಿ, ಚಿಕ್ಕಸಿಂದಗಿ, ಸಿಂದಗಿ, ಕಲಹಳ್ಳಿ, ಕೊರಹಳ್ಳಿ, ಆಲಮೇಲ, ದೇವಣಗಾಂವಿ ಮೇಲಿಂದ ಹೋಗಿದೆ. ಇದರದೊಂದು ಶಾಖೆಯು ಚಿಕ್ಕ ಸಿಂದಗಿ, ಯಂಕಂಚಿ, ಸುರತಾಣಗಳ ಮೇಲಿಂದ ಮೊಗಲಾಯಿ ಸೇರಿದೆ.

**ಹಿಪ್ಪರಗಿಯಿಂದ ತಾಳೀಕೋಟೆ ಮಾರ್ಗ:**—ದೇವೂರು, ಕೊಂಡ ಗೂಳಿ, ಹಂಚಲಿ, ಬೀಬೀಇಂಗಳಗಿ ಮೇಲಿಂದ ಹೋಗಿದೆ.

**ಹಿಪ್ಪರಗಿಯಿಂದ ಇಂಡಿಯ ಮಾರ್ಗ:**—ರೂಗಿ ಮೇಲಿಂದ ಹೋಗಿದೆ.

## ಊರುಗಳ ವಿಶೇಷ ವರ್ಣನೆ

**ಸಿಂದಗಿ :**—ವಿಜಾಪುರದಿಂದ ಈಶಾನ್ಯಕ್ಕೆ ೩೫ ಮೈಲಿನ ಮೇಲೆ ಅದೆ. ಇದು ತಾಲೂಕಿನ ಮುಖ್ಯ ಸ್ಥಳ. ಇಲ್ಲಿ ಮಾಮಲೇದಾರರ ಕಚೇರಿ, ದವಾಖಾನೆ, ಫೌಜದಾರರ ಕಚೇರಿ ಅವೆ. ಈ ಊರನ್ನು ಸಿಂಧುಬಲ್ಲಾಳ ನೆಂಬ ಅರಸನು ಸ್ಥಾಪಿಸಿ, ಇದಕ್ಕೆ ೧೨ನೆಯ ಇಸ್ವಿಯಲ್ಲಿ ಸಿಂಧಪುರವೆಂದು ಹೆಸರಿಟ್ಟನೆಂದು ಹೇಳುತ್ತಾರೆ. ಈ ಊರಲ್ಲಿ ಸಂಗಮೇಶ್ವರ ಗುಡಿಯಲ್ಲಿ ಅಸಂಖ್ಯ ಲಿಂಗಗಳೂ, ಹಲವು ಜೈನರ ಮೂರ್ತಿಗಳೂ ಅವೆ. ಮೊದಲು ಇಲ್ಲಿ ಜೈನರು ಪ್ರಬಲರಾಗಿದ್ದರೆಂದು ತಿಳಿಯುತ್ತದೆ. ಸಂಗಮೇಶ್ವರನ ಜಾತ್ರೆಯು ಮಕರಸಂಕ್ರಮಣ ದಿವಸ ಜರುಗುವದು. ಆ ಕಾಲಕ್ಕೆ ಈ ಗುಡಿಯೊಳಗಿನ ಈಶ್ವರನಿಗೂ ಪಾರ್ವತಿಗೂ ಮದುವೆಯಾಗುತ್ತದೆ.

ಪೂರ್ವಕಾಲದಲ್ಲಿ ಈ ಊರ ಕುಲಕರ್ಣಿಯಾದ ಚಿಕ್ಕಪ್ಪಯ್ಯನೆಂಬ ವನು ಸನ್ಯಾಸ ಆಶ್ರಮ ತೊಟ್ಟು, ದತ್ತಾತ್ರೇಯ ದೇವರನ್ನು ಆರಾಧಿಸಿ ಸತ್ಪುರುಷನೆನಿಸಿಕೊಂಡು, ಇದೇ ಊರಲ್ಲಿ ಮರಣಹೊಂದಿದನು. ಅವನ ಸಮಾಧಿಯ ಮೇಲೆ ಮಠವನ್ನು ಕಟ್ಟಿಸಿದ್ದಾರೆ. ಆಶ್ವೀನ ಶುದ್ಧ ಪೌರ್ಣಿಮೆ ಯಿಂದ ಮೂರು ದಿವಸಗಳ ವರೆಗೆ ಜಕ್ಕಪ್ಪಯ್ಯನ ಆರಾಧನೆ ಮಾಡುವರು. ಕಡೆಯ ದಿವಸ ಊಟಕ್ಕೆ ಬಂದ ಬ್ರಾಹ್ಮಣರ ಕಾಲು ತೊಳೆದ ನೀರು ಹರಿದು ಹೋಗಿ ಒಂದು ಬಿಂದಗಿಯಲ್ಲಿ ಬೀಳುತ್ತವೆ. ಎಷ್ಟು ನೀರು ಬಿದ್ದರೂ ಆ ಬಿಂದಿಗೆಯು ತುಂಬುವದೇ ಇಲ್ಲ. ಈ ಬಿಂದಿಗೆಯನ್ನು ಒಂದು ಜಗುಲಿಯ ಮೇಲೆ ಇಟ್ಟಿದ್ದಾರೆ. ಇದೊಂದು ಮಹತ್ವವಾದ ಸ್ಥಳವು. ಇದಲ್ಲದೆ ಅಲ್ಲಿ ಇನ್ನೊಂದು ನೋಡತಕ್ಕಂಥ ಮಹತ್ವವಾದ ದೊಡ್ಡ ದೇವಸ್ಥಾನವಿದೆ. ಅದರ ಗರ್ಭಗುಡಿಯಲ್ಲಿ ಎರಡು ಬಂಗಾರದ ತಂಬಿಗೆ ಗಳನ್ನೂ, ಒಂದು ಬೆಳ್ಳಿಯ ತಂಬಿಗೆಯನ್ನೂ ನೀರು ತುಂಬಿ ಇಟ್ಟಿದ್ದಾರೆ. ಅವುಗಳ ಮೇಲೆ ಅನುಕ್ರಮವಾಗಿ ಬಂಗಾರ ಹಾಗು ಬೆಳ್ಳಿಯ ಲಿಂಗಗಳು ಇರುವವು. ಈ ದೇವಸ್ಥಾನದ ಜಾತ್ರೆಯು ಪ್ರತಿವರುಷ ಆಷಾಢ ಶುದ್ಧ ಪೌರ್ಣಿಮೆಯ ದಿನ ಆಗುತ್ತದೆ. ಅಂದು ವೀರಶೈವ ಮುತ್ತೈದೆಯರು ಶ್ರೀನೀಲಗಂಗಮ್ಮನನ್ನು ಪೂಜಿಸಲು ಹೋಗುತ್ತಾರೆ. ಮೊದಲು ಐದು

ಮಂದಿ ಮುತ್ತೈದೆಯರು ಹೋಗುತ್ತಿದ್ದರಂತೆ. ಇತ್ತೀಚೆಗಂತೂ ಪೂಜಿಸು ವವರ ಸಂಖ್ಯೆಯು ಮಿತಿಮೀರಿದೆ. ಗರ್ಭಗುಡಿಯು ಬಹು ವಿಸ್ತಾರವುಳ್ಳ



ಶ್ರೀನೀಲಗಂಗಮ್ಮನ ದೇವಸ್ಥಾನ (ಸಿಂದಗಿ)

ದ್ದಿದ್ದರೂ ಕೂಡ ಒಮ್ಮೊಮ್ಮೆ ಜನದಟ್ಟಣೆಯಿಂದ ಮುತ್ತೈದೆಯರು ಮೂರ್ಛೆ ಹೊಂದಿ ಬೀಳುವರು. ಆದರೆ ಇದೆಲ್ಲ ನೀಲಗಂಗಮ್ಮನ ಪ್ರೇರಣೆಯಿಂದ ಆಗುತ್ತದೆಂದು ಜನರ ನಂಬಿಗೆಯುಂಟು. ಈ ಗುಡಿಗೆ ಭಕ್ತಜನರು ಪ್ರತಿ ವರುಷ ಕಾಣಿಕೆ (ಮುಡುಪು) ಯನ್ನು ತಪ್ಪದೆ ಕಳಿಸುವರಂತೆ.

ದಿವಾಕರ ದೀಕ್ಷಿತನೆಂಬ ದಾಳಿಗಾರನು ಸನ್ ೧೬೨೪ರಲ್ಲಿ ಸಿಂದಗಿ ಕೋಟೆಯನ್ನು ಮುತ್ತಿ ಸುಲಿಗೆ ಮಾಡುತ್ತಿದ್ದುದನ್ನು ನೋಡಿ, ನವ್ಮ ಸರಕಾರದವರು ಅವನನ್ನು ಹಿಡಿದು ಶಿಕ್ಷೆಗೆ ಗುರಿಮಾಡಿ ಕೊಂದು ಕೋಟೆ ಯನ್ನು ನೆಲಸಮ ಮಾಡಿದರಂತೆ.

**ಗೊಲಗೇರಿ :**—(ಗೊಲ್ಲಗೇರಿ) ಇದು ಸಿಂದಗಿಯ ಆಗ್ನೇಯಕ್ಕೆ ೧೦ ಮೈಲಿನ ಮೇಲೆ ಅದೆ. ಈ ಊರನ್ನು ೧೪ನೆಯ ಶತಕದಲ್ಲಿ ಒಬ್ಬ ಗೊಲ್ಲಾಳ ನೆಂಬ ಕುರುಬನು ಕಟ್ಟಿಸಿದನೆಂದು ಹೇಳುತ್ತಾರೆ. ಅವನು ಶ್ರೀಶೈಲ ಮಲ್ಲಿಕಾರ್ಜುನ ದೇವರ ಜಾತ್ರೆಗೆ ಹೋಗುವ ಜನರಿಗೆ, "ನನಗೊಂದು ಲಿಂಗವನ್ನು ತಂದುಕೊಡಿರಿ" ಎಂದು ಕೇಳಿದನು. ಒಬ್ಬನು ಚೇಷ್ಟೆಯಿಂದ ಒಂದು ಕುರಿಯ ಹಿಕ್ಕಿಯನ್ನು ತಂದುಕೊಟ್ಟನಂತೆ. ಆ ಕುರುಬನು ಅಲ್ಲಿ ಒಂದು ಗುಡಿಯನ್ನು ಕಟ್ಟಿಸಿ, ಆ ಹಿಕ್ಕಿಯನ್ನು ಅದರಲ್ಲಿಟ್ಟು ಬಹು ಭಕ್ತಿ ಯಿಂದ ಪೂಜಿಸಲು, ಆ ಹಿಕ್ಕಿಯೇ ನಿಜಲಿಂಗವಾಗಿ ತೋರಿತು. ಈ ಲಿಂಗಕ್ಕೆ ಗೊಲ್ಲಾಳದಲ್ಲಿ ಹುಟ್ಟಿದ ಈಶ್ವರ(ಗೊಲ್ಲಾಳೇಶ್ವರ)ನೆಂದು ಕರೆಯಹತ್ತಿದರು. ಎಲ್ಲ ಜಾತಿಯ ಜನರು ಈ ದೇವರಿಗೆ ನಡಕೊಳ್ಳುತ್ತಾರೆ. ಪ್ರತಿವರುಷ ಚೈತ್ರ ಬ. ಪ್ರತಿಪದೆಗೆ ರಥೋತ್ಸವವಾಗುತ್ತದೆ. ಆ ಕಾಲಕ್ಕೆ ಸುಮಾರು ೪೦-೫೦ ಸಾವಿರ ಜನರು ಕೂಡುವರು. ಎಲ್ಲ ತರದ ಅಂಗಡಿಗಳೂ ಬರುತ್ತವೆ.

**ಹಿಪ್ಪರಗಿ :**—ಸಿಂದಗಿಯ ನೈಋತ್ಯಕ್ಕೆ ೧೫ ಮೈಲಿನ ಮೇಲೆ ಅದೆ. ಈ ಊರ ಹೊರಗೆ ಕಲ್ಮೇಶ್ವರ ಗುಡಿ ಅದೆ. ಅದರಲ್ಲಿ ೧೨೫ ವರ್ಷದ್ದೊಂದು ಲಿಪಿಯುಂಟು. ಇನ್ನೊಂದು ಲಿಪಿಯು ಮಾರ್ತಾಂಡನ ಗುಡಿಯಲ್ಲುಂಟು. ಕಲ್ಮೇಶ್ವರನ ಜಾತ್ರೆಯು ಆಶ್ವೀನ ಮಾಸದಲ್ಲಿ ಆಗುತ್ತದೆ. ಮತ್ತು ಇಲ್ಲಿ ಮಲ್ಲಯ್ಯನ ಜಾತ್ರೆಯೂ ಬಹು ವೈಭವದಿಂದ ಜರುಗುವದು. ಇದು ವಿಜಾಪುರ, ಇಂಡಿ, ಸಿಂದಗಿ, ತಾಳಿಕೋಟೆಗಳ ಲೈನದಾರಿ ಕೂಡುವ ಸ್ಥಳದಲ್ಲಿ ಅದೆ. ಇಲ್ಲಿಯ ಸಂತೆಯು ದೊಡ್ಡ ಪ್ರಮಾಣದಿಂದ ನೆರೆಯುವದು. ವ್ಯಾಪಾರವು ತಕ್ಕಮಟ್ಟಿಗೆ ಆಗುವದು.

**ದೇವಣಗಾಂವಿ :**—ಸಿಂದಗಿಯ ಈಶಾನ್ಯಕ್ಕೆ ೧೨ ಮೈಲಿನ ಮೇಲೆ ಭೀಮಾ ನದಿಯ ದಂಡೆಯಲ್ಲಿದೆ. ಈ ಊರನ್ನು ದೇವಭಟ್ಟನೆಂಬ

ಬ್ರಾಹ್ಮಣನು ಕಟ್ಟಿಸಿದನೆಂದು ಹೇಳುತ್ತಾರೆ. ಇಲ್ಲಿ ಕಲ್ಮೇಶ್ವರ, ಮಲ್ಲಿಕಾರ್ಜುನ, ಶಂಕರಲಿಂಗ ಎಂಬ ದೇವರ ಗುಡಿಗಳುಂಟು.

**ಚಟ್ಟರಕಿ :**—ಸಿಂದಗಿಯ ಪಶ್ಚಿಮಕ್ಕೆ ೧೦ ಮೈಲಿನ ಮೇಲೆ ಅದೆ. ಇಲ್ಲಿಯ ದತ್ತಾತ್ರೇಯ ಗುಡಿಯ ಒಳಗೂ ಹೊರಗೂ ಆನೆ, ಸಿಂಹ ಮುಂತಾದ ಹಿಂಸ್ರಪಶುಗಳ ಕಲ್ಲಿನ ಮೂರ್ತಿಗಳುಂಟು. ಇಲ್ಲಿ ಸವೆದದ್ದೊಂದು ಲಿಪಿಯದೆ. ಅದರಲ್ಲಿಯ ಅಕ್ಷರಗಳು ತಿಳಿಯುವಂತಿಲ್ಲ.

**ಚಾಂದಕವಠೆ:**—ಸಿಂದಗಿಯ ವಾಯುವ್ಯಕ್ಕೆ ೮ ಮೈಲಿನ ಮೇಲಿದೆ. ಈ ಊರಲ್ಲಿ ರಾಮಲಿಂಗನ ಗುಡಿಯುಂಟು. ಪರಮಾನಂದನ ಗುಡಿಯು ಊರ ಹೊರಗೆ ಅದೆ. ಇವೆರಡೂ ಹಳೆಯ ದೇವಾಲಯಗಳು.

**ಆಲಮೇಲ :**—ಸಿಂದಗಿಯ ಉತ್ತರಕ್ಕೆ ಅದೆ. ಈ ಊರನ್ನು ಬಿಜ್ಜಳರಾಜನು ಕಟ್ಟಿಸಿದನೆಂದು ಹೇಳುವರು. ಇಲ್ಲಿ ಮಾಲೋಜಿ ರಾಮಲಿಂಗನ ಗುಡಿಯು ಪುರಾತನದ್ದಿರುತ್ತದೆ. ಅದರಲ್ಲಿದ್ದ ಮೂರು ಲಿಂಗಗಳಲ್ಲಿ ಒಂದಕ್ಕೆ ನಾಲ್ಕು ಮುಖಗಳಿವೆ. ಸಭಾಮಂಟಪದ ಗೋಡೆಗಳ ಮೇಲೆಯೂ ಕಂಬಗಳ ಮೇಲೆಯೂ ಸುಂದರವಾದ ಚಿತ್ರಗಳಿವೆ. ಶಾಲೆಯ ಬಳಿಯಲ್ಲಿ ಒಂದು ಕಲ್ಲಿನ ನಾಲ್ಕೂ ಮಗ್ಗಲುಗಳ ಮೇಲೆ ೧೧೦೭ನೆಯ ವರುಷದ ಲಿಪಿಗಳಿರುತ್ತವೆ. ಊರ ಹೊರಗೆ ಹಾಳಾದದ್ದೊಂದು ಹನುಮಂತನ ಗುಡಿಯಲ್ಲಿ ಒಬ್ಬ ಮನುಷ್ಯನನ್ನು ಎರಡು ಆನೆಗಳು ಮೇಲಕ್ಕೆತ್ತಿ ಹಿಡಿದ ಹಾಗೆ ಚಿತ್ರವನ್ನು ಕೆತ್ತಿದ್ದಾರೆ. ಮತ್ತೊಂದು ಅರ್ವಾಚೀನ ಕಾಲದ ಈಶ್ವರನ ಗುಡಿಯಲ್ಲಿಯೂ ಅನೇಕ ಚಿತ್ರಗಳುಂಟು. ಇದನ್ನು ರಾವಜೀ ನರಹರ ಬನ್ನೀ ಎಂಬ ಅಧಿಕಾರಿಯು ಸನ್ ೧೭೮೦ರಲ್ಲಿ ಕಟ್ಟಿಸಿದನೆಂದು ಹೇಳುವರು.

ಮುಧೋಳದ ಮಾಲೋಜಿರಾವ ಘೋರ್ಪಡೆ ಎಂಬ ಸರದಾರನ ವಶದಲ್ಲಿ ಈ ಊರು ಇದ್ದಾಗ, ಅವನು ಇಲ್ಲಿ ಸನ್ ೧೮೦೦ನೆಯ ಇಸ್ವಿಯಲ್ಲಿ ಶ್ರೀಭವಾನೀದೇವಿಯ ಗುಡಿಯನ್ನು ಕಟ್ಟಿಸಿದನು. ಮತ್ತು ದೇಶಪಾಂಡೆ ಶೇಷಗಿರಿರಾಯನು ಸನ್ ೧೭೮೮ರಲ್ಲಿ ಶ್ರೀರಾಮದೇವರ ಗುಡಿಯನ್ನು ಕಟ್ಟಿಸಿದ್ದಾನೆಂದೂ, ಇದಕ್ಕೆ ಪೇಶ್ವೆ ಸರಕಾರದಿಂದ ಇನಾಮು ಜಮೀನು ಹಾಕಿಸಿದ್ದಾನೆಂದೂ ಹೇಳುವರು. ಆ ಜಮೀನುಗಳು ಈಗಲೂ ಇರುವವು.

ಇವಲ್ಲದೆ ಈ ಊರಲ್ಲಿ ಹನುಮಂತದೇವರ ಗುಡಿ, ಪಾವಾಡಿ ಬಸವೇಶ್ವರನ ಗುಡಿ, ದೇವಪ್ಪಯ್ಯನ ಸಮಾಧಿ, ಗಾಲಿಸಾಹೇಬನ ಗೋರಿ, ಶ್ರೀಲಕ್ಷ್ಮೀದೇವಿಯ ಗುಡಿ, ಅಕ್ಕತಂಗಿಯರ ಭಾವಿ ಮುಂತಾದ ಪೂರ್ವ ಕಾಲದ ಸ್ಮಾರಕ (ಗುರುತು) ಗಳುಂಟು.

**ದೇವರಹಿಪ್ಪರಗಿ** :—ಸಿಂದಗಿಯಿಂದ ಈಶಾನ್ಯಕ್ಕೆ ೧೨ ಮೈಲಿನ ಮೇಲೆ ಅದೆ. ವಾಸುದೇವ ಭಗವಂತ ಫಡಕೆ ಎಂಬ ದಾಳಿಗಾರನು ಸನ್ ೧೮೭೯ನೆಯ ಜುಲೈ ತಿಂಗಳ ೨೧ನೆಯ ತಾರೀಖಿನ ದಿವಸ ರಾತ್ರಿ ಈ ಊರಲ್ಲಿಯದೊಂದು ಗುಡಿಯಲ್ಲಿ ಮಲಗಿರುವಾಗ, ಅವನನ್ನು ಪುಣೆಯ ಪೋಲೀಸ ಸುಪರಿಂಟೆಂಡೆಂಟರೂ, ನಿಜಾಮ ಇಲಾಖೆಯ ಪೋಲೀಸ ಕಮಿಶನರರೂ ಕೂಡಿ ಹಿಡಿದರು. ಅಂದಿನಿಂದ ಈ ಊರು ಪ್ರಸಿದ್ಧಿಗೆ ಬಂದಿದೆ.

**ಪ್ರಶ್ನೆಗಳು** :—ಸಿಂದಗಿ ತಾಲೂಕಿನ ಮೇರೆಗಳಾವವು? ಈ ತಾಲೂಕು ಯಾವ ಭಾಗವಲ್ಲಿದೆ? ಭೂಮಿಯ ಸ್ವರೂಪ ಹೇಳಿರಿ? ಇಲ್ಲಿಯ ಉದ್ಯೋಗವೇನು? ಉತ್ತರ ಭಾಗವಲ್ಲಿ ಹರಿದ ನದಿಯು ಯಾವದು? ಅದರ ಧಡದಲ್ಲಿದ್ದ ಊರುಗಳಾವವು? ಶಾಲೆಗಳಿದ್ದ ಊರುಗಳಾವವು? ಸಂತೆಗಳಾಗುವ ಊರುಗಳಾವವು? ಹಿಪ್ಪರಗಿಯಿಂದ ಮೊಗಲಾಯಿ ಕಡೆಗೆ ಹೋಗುವ ಮಾರ್ಗಗಳೆಷ್ಟು? ಸಿಂದಗಿಯ ಮಾಹಿತಿ ಹೇಳಿರಿ? ಗೊಲಗೇರಿ ಅಂತಾ ಹೆಸರು ಬರಲು ಕಾರಣವೇನು? ಸಿಂದಗಿಯಿಂದ ಆಲಮೇಲ ಯಾವ ದಿಕ್ಕಿಗೆ ಅವೆ? ೧೮೦೦ರಲ್ಲಿ ಯಾವ ಗುಡಿ ಕಟ್ಟಲ್ಪಟ್ಟಿತು? ದೇಶಪಾಂಡೆ ಶೇಷಗಿರಿ ರಾಯರು ಕಟ್ಟಿಸಿದ ಗುಡಿ ಯಾವದು?

---

## ಬಾಗೇವಾಡಿ ತಾಲೂಕು

**ಮೇರೆಗಳು** :– ಉತ್ತರಕ್ಕೆ ವಿಜಾಪುರ, ಸಿಂದಗಿ ತಾಲೂಕುಗಳು; ಪೂರ್ವಕ್ಕೆ ಮುದ್ದೇಬಿಹಾಳ ತಾಲೂಕು; ದಕ್ಷಿಣಕ್ಕೆ ಕೃಷ್ಣಾನದಿ, ಅದರಾಚೆಯಲ್ಲಿ ಬಾಗಲಕೋಟ ತಾಲೂಕು; ಪಶ್ಚಿಮಕ್ಕೆ ವಿಜಾಪುರ ತಾಲೂಕುಗಳುಂಟು.

ಈ ತಾಲೂಕಿನ ಕ್ಷೇತ್ರಫಲವು ೭೧೪ ಚೌರಸ ಮೈಲು, ಜನಸಂಖ್ಯೆ ೧,೧೧,೨೫೦. ತೆರಿಗೆ ೮೩,೬೨೦ ರೂಪಾಯಿಗಳುಂಟು.

**ಸ್ಥಾನ:**—ಈ ತಾಲೂಕು ಜಿಲ್ಲೆಯ ಮಧ್ಯಭಾಗದಲ್ಲಿದೆ. ಇದರಲ್ಲಿ ೧೧೭ ಸರಕಾರಿ ಹಳ್ಳಿಗಳೂ, ೯ ದುಮಾಲಿ ಹಳ್ಳಿಗಳೂ ಇರುತ್ತವೆ.

**ಭೂಮಿ ಸ್ವರೂಪ:**—ಈ ತಾಲೂಕು ಕೃಷ್ಣಾ, ಡೋಣಿ ನದಿಗಳ ನಡುವೆ ಅದೆ. ಇದರ ಉತ್ತರ, ಈಶಾನ್ಯ, ಪೂರ್ವಭಾಗಗಳಲ್ಲಿ ಡೋಣೀ ತೀರದ ಮೇಲಾದ ಎರೆಭೂಮಿಯೂ, ದಕ್ಷಿಣ ಭಾಗದಲ್ಲಿ ಕೃಷ್ಣಾ ತೀರದ ಎರೆಭೂಮಿಯೂ ಉಂಟು. ಉಳಿದ ಭಾಗವೆಲ್ಲ ಗರಸು ಭೂಮಿಯು. ಹೂವಿನಹಿಪ್ಪರಗಿ, ಇಂಗಳೇಶ್ವರ, ದಿಂಡವಾರಗಳ ನೆರೆಯಲ್ಲೊಂದು ಮರಡಿ (ಸಣ್ಣ ಗುಡ್ಡದ) ಸಾಲು ಹೋಗಿದೆ. ಉಳಿದದ್ದೆಲ್ಲ ಬೈಲುಪ್ರದೇಶವದೆ.

**ಹವೆ, ಮಳೆ, ನೀರು:**—ಇಲ್ಲಿಯ ಹವೆಯು ಉಷ್ಣವಾದದ್ದಿದ್ದರೂ ಹಿತಕರವು. ಚಳಿಗಾಲದಲ್ಲಿ ಪೂರ್ವದ ಗಾಳಿಯೂ, ಬೇಸಿಗೆಯಲ್ಲಿ ಉಗ್ರವಾದ ಬಿರುಗಾಳಿಯೂ ಬೀಸುತ್ತವೆ. ಈ ತಾಲೂಕಿನಲ್ಲಿ ಮಳೆಯು ೧೫ ರಿಂದ ೩೮ ಇಂಚಿನ ವರೆಗೆ ಅಂದರೆ ಸರಾಸರಿ ೨೮ ಇಂಚು ಆಗುತ್ತದೆ. ನೀರು ತಕ್ಕಷ್ಟು ಇಲ್ಲ. ಡೋಣಿ, ಕೃಷ್ಣಾ ನದಿಗಳಿಗೆ ಕೂಡುವ ಹಳ್ಳಗಳು ಮಳೆಗಾಲದಲ್ಲಿ ಮಾತ್ರ ಹರಿಯುತ್ತವೆ. ಕೆರೆಗಳೂ ಸಹ ಕಡಿಮೆ ಇವೆ. ಊರೂರಿಗೆ ಭಾವಿಗಳು ಮಾತ್ರ ಅವೆ. ಆ ಭಾವಿಗಳ ನೀರಿನಿಂದ ಹಲಕೆಲವು ಹಳ್ಳೀ ಜನರು ತೋಟಪಟ್ಟಿಗಳನ್ನು ಮಾಡಿಕೊಂಡಿರುವರು.

ಈ ತಾಲೂಕಿನ ಜನರ ಮುಖ್ಯ ಉದ್ಯೋಗವು ಒಕ್ಕಲತನ. ಆದರೆ ವಂದಾಲ, ಗೊಳಸಂಗಿ, ಮುತ್ತಗಿ, ಕೊಲ್ಹಾರ, ನಿಡಗುಂದಿ, ನರಸಲಗಿ ಮುಂತಾದ ಊರುಗಳಲ್ಲಿ ಮಾತ್ರ ನೇಕಾರಿಕೆಯು ತಕ್ಕಮಟ್ಟಿಗೆ ನಡೆಯುತ್ತದೆ. ವ್ಯಾಪಾರಸ್ಥರು ತಕ್ಕಮಟ್ಟಿಗೆ ವ್ಯವಹಾರ ಮಾಡುವರು. ಈ ತಾಲೂಕಿನಲ್ಲಿ ಮುಂಗಾರಿ, ಹಿಂಗಾರಿ ಬೆಳೆಗಳು ಬರುವವು. ತಳೆವಾಡ, ಕೂಡಗಿಗಳಲ್ಲಿ ವೀಳೆದ ಎಲೆಯ ತೋಟಗಳು ಪ್ರಸಿದ್ಧ. ಕೊಲ್ಹಾರದಲ್ಲಿ ದಾಳಿಂಬು, ಪೇರಲಹಣ್ಣು ಪ್ರಸಿದ್ಧ. ರೋಣಿಹಾಳ, ಮಸೂತಿ, ಆಸಂಗಿ, ಕಲಬುರಕಿ ಊರುಗಳ ಮೆಣಸಿನಕಾಯಿ, ಉರುಳೇಗಡ್ಡಿ ಪ್ರಸಿದ್ಧ. ಇವಲ್ಲದೆ ಹತ್ತಿ, ಗೋದಿ, ಎಣ್ಣೆಕಾಳು, ಹುಣಸಿಹಣ್ಣು ಮುಂತಾದ ಸಾಮಾನುಗಳು ಈ ತಾಲೂಕಿನಿಂದ ಹೊರಗೆ ಮಾರಾಟಕ್ಕೆ ಹೋಗುತ್ತವೆ.

**ದೊಡ್ಡ ಊರುಗಳೂ, ಶಾಲೆಗಳಿದ್ದ ಊರುಗಳೂ:—** ಬಾಗೇವಾಡಿ, ಉಕ್ಕಲಿ, ಮನಗೋಳಿ, ಕೊಲ್ಹಾರ, ನಿಡಗುಂದಿ, ಬಳೂತಿ, ಭೈರವಾಡಿಗಿ, ಚಬನೂರು, ಚಿಮ್ಮಲಗಿ, ದಿಂಡವಾರ, ಗೊಳಸಂಗಿ, ಹತ್ತರಕಿಹಾಳ, ಹೆಬ್ಬಾಳ, ಹೂವಿನಹಿಪ್ಪರಗಿ, ಹುಣಸಿಹಾಳ, ಇಂಗಳೇಶ್ವರ, ಇಟ್ಟಗಿ, ಕೂಡಿಗಿ, ಮಲಘಾಣ, ಮಣ್ಣೂರ, ಮಾರಕಬ್ಬಿನಹಳ್ಳಿ, ಮಸೂತಿ, ಮುಳವಾಡ, ಮುತ್ತಗಿ, ರಬಿನಾಳ, ಸಾಲವಾಡಗಿ, ಸಾಸನೂರ, ಟಕ್ಕಳಕಿ, ತೆಲಗಿ, ವಡವಡಗಿ, ವಂದಾಲ, ಯಾಳವಾರ, ಯರನಾಳ, ಆಲಮಟ್ಟಿ.

**ಪೋಸ್ಟ ಇದ್ದ ಊರುಗಳು:-** ಬಾಗೇವಾಡಿ, ಉಕ್ಕಲಿ, ಮನಗೋಳಿ, ಕೊಲ್ಹಾರ, ನಿಡಗುಂದಿ, ಗೊಳಸಂಗಿ, ಮುತ್ತಗಿ, ಮುಳವಾಡ, ತೆಲಗಿ, ಚಿಮ್ಮಲಗಿ, ಆಲಮಟ್ಟಿ, ಹೂವಿನಹಿಪ್ಪರಗಿ.

**ತಾರ ಆಫೀಸು :** – ಬಾಗೇವಾಡಿ.

**ಪೋಲೀಸ ಗ್ಯಾಟ ಇದ್ದ ಊರುಗಳು:—** ಬಾಗೇವಾಡಿಯಲ್ಲಿ ಠಾಣಾಪೋಸ್ತ. ಮನಗೋಳಿ, ಕೊಲ್ಹಾರ, ನಿಡಗುಂದಿ, ಹೂವಿನಹಿಪ್ಪರಗಿ.

ಸಂತೆಯಾಗುವ ಊರುಗಳು :—ಬಾಗೇವಾಡಿ, ಮನಗೋಳಿ, ಉಕ್ಕಲಿ, ಕೊಲ್ಹಾರ, ನಿಡಗುಂದಿ,ವಂದಾಲ, ಗೊಳಸಂಗಿ, ಹೂವಿನಹಿಪ್ಪರಗಿ.

ಜಾತ್ರೆಯಗಾಗುವ ಊರುಗಳು :—ಬಾಗೇವಾಡಿಯಲ್ಲಿ **ಶ್ರೀಬಸವೇಶ್ವರ ಜಾತ್ರೆಯು** ಶ್ರಾವಣ ಮಾಸದಲ್ಲಿ ಆಗುತ್ತದೆ. ಅರಳದಿನ್ನಿಯಲ್ಲಿ **ಧವಳರ ಜಾತ್ರೆ**ಯಾಗುತ್ತದೆ. ಮನಗೋಳಿಯಲ್ಲಿ **ಬಸವೇಶ್ವರ ಜಾತ್ರೆ**ಯು ಶ್ರಾವಣದಲ್ಲಿಯೂ, ರಾಮೇಶ್ವರ ದೇವಾಲಯದ ಉತ್ಸವವು ರಾಮನವಮಿಗೆಗೂ ಆಗುವವು. ಮುತ್ತಗಿ, ಮುಳವಾಡಗಳಲ್ಲಿ **ಗೌರೀಜಾತ್ರೆ**ಯಾಗುತ್ತದೆ.

## ಸೈನಮಾರ್ಗ ಮತ್ತು ರೇಲ್ವೆಮಾರ್ಗ

**ಬಾಗೇವಾಡಿಯಿಂದ ವಿಜಾಪುರ ಮಾರ್ಗ:—**ಎರನಾಳ, ಮನಗೋಳಿಗಳ ಮೇಲಿಂದ ಹೋಗಿದೆ.

**ಬಾಗೇವಾಡಿಯಿಂದ ಕೊಲ್ಹಾರ ಮಾರ್ಗ:—**ಟಕ್ಕಳಕಿ, ಮುತ್ತಗಿ, ತೆಲಗಿಗಳ ಮೇಲಿಂದ ಹೋಗಿದೆ.

**ಬಾಗೇವಾಡಿಯಿಂದ ಮುದ್ದೇಬಿಹಾಳ ಮಾರ್ಗ:**- ಹುಣಸಿಹಾಳ, ಹೂವಿನಹಿಪ್ಪರಗಿ, ಬ್ಯಾಕೋಡಗಳ ಮೇಲಿಂದ ಹೋಗಿದೆ.

**ಸೊಲ್ಲಾಪುರದಿಂದ ಹುಬ್ಬಳ್ಳಿ ಮಾರ್ಗ**·—(ಈ ತಾಲೂಕಿನಲ್ಲಿ) ಮುಳವಾಡ, ಕೊಲ್ಹಾರಗಳ ಮೇಲಿಂದ ಹೋಗಿದೆ.

**ಸೊಲ್ಲಾಪುರದಿಂದ ಬಳ್ಳಾರಿ ಮಾರ್ಗ** :—(ಈ ತಾಲೂಕಿನಲ್ಲಿ) ಸಾತಿಹಾಳ, ಇಂಗಳೇಶ್ವರ, ಹೂವಿನಹಿಪ್ಪರಗಿಗಳ ಮೇಲಿಂದ ಹೋಗಿದೆ·

**ಸ್ಟೇಶನ್ ಇದ್ದ ಊರುಗಳು** :— ಆಲಮಟ್ಟಿ, ತೆಲಗಿ, ಮುಳವಾಡ.

## ಊರುಗಳ ವಿಶೇಷ ವರ್ಣನೆ

**ಬಾಗೇವಾಡಿ:**— ವಿಜಾಪುರದಿಂದ ಆಗ್ನೇಯಕ್ಕೆ ೨೫ ಮೈಲಿನ ಮೇಲೆ ಅದೆ. ಇದು ತಾಲೂಕಿನ ಮುಖ್ಯ ಊರು. ಇಲ್ಲಿ ಮಾಮಲೇದಾರ, ಫೌಜ



**ಬಾಗೇವಾಡಿಯ ಬಸವೇಶ್ವರ ದೇವಾಲಯ**

ದಾರರ ಕಚೇರಿಗಳೂ, ದವಾಖಾನೆಯೂ ಇರುತ್ತವೆ. ಇಲ್ಲಿ ಬಸವೇಶ್ವರ, ಸಂಗಮೇಶ್ವರ, ಮಲ್ಲಿಕಾರ್ಜುನ, ಗಣಪತಿ, ಹನುಮಂತ ಮುಂತಾದ ಪ್ರಾಚೀನ ಕಾಲದ ಗುಡಿಗಳುಂಟು. ಗಣಪತಿ ಗುಡಿಯಲ್ಲಿಯೂ ಸಾರಂಗ ಭಾವಿಯ ಬಳಿಯಲ್ಲಿಯೂ ಲಿಪಿಗಳು ಇರುತ್ತವೆ. ಇದೇ ಊರಲ್ಲಿ ವೀರಶೈವ ಮತವನ್ನು ಪುನರುಜ್ಜೀವನಗೊಳಿಸಿದ **ಶ್ರೀಬಸವೇಶ್ವರನು** ಹುಟ್ಟಿದ್ದರಿಂದ ಇದಕ್ಕೆ ಬಸವನ-ಬಾಗೇವಾಡಿ ಎಂತಲೂ ಅನ್ನುವರು. ಇದಕ್ಕೆ ಮೊದಲು **ಭೋಗವತಿ** ಎಂಬ ಹೆಸರಿತ್ತು. ಚಾಲುಕ್ಯರ ಆಳಿಕೆಯಲ್ಲಿ ಇಲ್ಲಿ ಒಬ್ಬ ಮಾಂಡಲಿಕನಿದ್ದನು. ಬಸವನ ಗುಡಿಯನ್ನು ಅದೇ ಕಾಲಕ್ಕೆ ಅಂದರೆ ೭-೮ ನೂರು ವರುಷಗಳ ಹಿಂದೆ ಕಟ್ಟಿಸಿರಬಹುದೆಂದು ಹೇಳುವರು.

**ಇಂಗಳೇಶ್ವರ:**—ಬಾಗೇವಾಡಿಯ ಈಶಾನ್ಯಕ್ಕೆ ೮ ಮೈಲಿನ ಮೇಲೆ ಅದೆ. ೧೨ನೆಯ ಶತಮಾನದಲ್ಲಿ ಕಟ್ಟಿಸಿದ **ಸೋಮೇಶ್ವರ, ನಾರಾಯಣ, ಕಲಮೇಶ್ವರ** ಎಂಬ ಮೂರು ಗುಡಿಗಳು ಇರುತ್ತವೆ. ೪ನೆಯ ಶೋಭನ ದೇವರ ಗುಡಿಯಲ್ಲಿ ಒಂದು ಲಿಪಿಯುಂಟು. ಊರ ಹತ್ತರ ಗುಡ್ಡದೊಳಗೆ ಗುಡಿಗಳೆರಡು ಇರುತ್ತವೆ. ಅವುಗಳಲ್ಲಿ ಅಕ್ಕನಾಗಮ್ಮನ ಗುಡಿಯು ಹಾಳಾಗಿದೆ. ಸಿದ್ಧೇಶ್ವರನ ಗುಡಿಯು ಬಹಳ ಸುಂದರವಾಗಿರುವದು. ಇಂಗಳೇಶ್ವರ ಬಳಿಯಲ್ಲಿ ತಿಂಗಳೇಶ್ವರ ಎಂಬುದೊಂದು ಹಳೆಯ ಪಟ್ಟಣವಿತ್ತೆಂದು ಹೇಳುತ್ತಾರೆ. ನಾರಾಯಣ ಗುಡಿಯಲ್ಲಿಯೂ, ಸೋಮೇಶ್ವರ ಗುಡಿಯಲ್ಲಿಯೂ ಲಿಪಿಗಳಿರುತ್ತವೆ.

**ಮುತ್ತಗಿ:**—ಬಾಗೇವಾಡಿಯ ನೈಋತ್ಯಕ್ಕೆ ಆರು ಮೈಲಿನ ಮೇಲೆ ಅದೆ. ಇಲ್ಲಿ ೯ ಗುಡಿಗಳುಂಟು. ಮತ್ತು ಒಂದು ದೊಡ್ಡದಾದ ಭಾವಿಯೂ ಉಂಟು. ಅದಕ್ಕೆ ಗೌರೀಭಾವಿ ಎಂದು ಅನ್ನುವರು. ಭಾವಿಯಲ್ಲಿ ಮತ್ತು ಲಕ್ಷ್ಮೀನಾರಾಯಣ ಗುಡಿಯಲ್ಲಿ ದೇವಗಿರಿಯ ಯಾದವ ಅರಸರು ೧೧೮೯ ರಲ್ಲಿ ಬರೆಯಿಸಿದ ಲಿಪಿಗಳಿರುತ್ತವೆ.

**ಹೆಬ್ಬಾಳ:**—ಬಾಗೇವಾಡಿಯ ದಕ್ಷಿಣಕ್ಕೆ ೧೦ ಮೈಲಿನ ಮೇಲೆ ಅದೆ. ಈ ಊರ ಬಳಿಯಲ್ಲಿದ್ದ ಮುಳಗಳ್ಳಿಯೊಳಗೆ ಒಂದು ಜೈನಗುಡಿಯು ಅದೆ. ಮತ್ತೊಂದು ಜಕಣಾಚಾರ್ಯರ ಕಾಲಕ್ಕೆ ಕಟ್ಟಿಸಿದ ಶ್ರೀಮಲ್ಲಿಕಾರ್ಜುನ

ದೇವರ ಗುಡಿಯು ಊರ ಹೊರಗೆ ಉಂಟು. ಈ ಊರಲ್ಲಿ ಇನ್ನೊಂದು ವೀರಭದ್ರದೇವರ ಗುಡಿಯುಂಟು.

**ಚಿಮ್ಮಲಗಿ:**—ಬಾಗೇವಾಡಿಯ ದಕ್ಷಿಣಕ್ಕೆ ಕೃಷ್ಣಾ, ಘಟಪ್ರಭಾ ನದಿಗಳು ಕೂಡುವಲ್ಲಿರುವ ಮೂರಮಟ್ಟಿ ಸಂಗಮದಿಂದ ೪ ಮೈಲಿನ ಮೇಲೆ ಅದೆ. ಈ ಊರು ಪೂರ್ವಕಾಲದಿಂದಲೂ ಪ್ರಸಿದ್ಧವಾಗಿದೆ. ಊರ ಒಳಗೂ ಹೊರಗೂ ಕೂಡಿ ೧೦೮ ಲಿಂಗಗಳಿರುವದರಿಂದಲೂ, ಇದು ಹಿರೇಹೊಳೆ (ಕೃಷ್ಣಾನದಿ) ಯ ದಂಡೆಯಲ್ಲಿದ್ದುದರಿಂದಲೂ ಪವಿತ್ರ ಕ್ಷೇತ್ರವೆನಿಸಿದೆ. ಇಲ್ಲಿ ಎಷ್ಟೋ ಸವೆದ ಕನ್ನಡ ಲಿಪಿಗಳುಂಟು. ಮೊದಲು ಈ ಊರು ಸಂಸ್ಥಾನಿಕರದಿತ್ತು.

**ಆಲಮಟ್ಟಿ:**—ಬಾಗೇವಾಡಿಯ ದಕ್ಷಿಣಕ್ಕೆ ೧೫ ಮೈಲಿನ ಮೇಲೆ ಕೃಷ್ಣಾನದಿಯ ಸಮೀಪಕ್ಕೆ ಅದೆ. ಮೊದಲು ಇದು ಹಾಳಾದ ಊರು. ಇತ್ತೀಚೆಗೆ ಶ್ರೀ. ಹರ್ಡೇಕರ ಮಂಜಪ್ಪನವರು ಇಲ್ಲಿ ವೀರಶೈವ ವಿದ್ಯಾಲಯ, ಪ್ರಿಂಟಿಂಗ್ ಪ್ರೆಸ್ ಮೊದಲಾದವುಗಳನ್ನು ಸನ್ ೧೯೨೭ರಲ್ಲಿ ಸ್ಥಾಪಿಸಿದರು. ವಿದ್ಯಾಲಯವು ಸ್ಥಾಪಿತವಾದಂದಿನಿಂದ ೮-೧೦ ವರುಷಗಳ ವರೆಗೆ ಒಳ್ಳೇ ಉತ್ಸುಕತೆಯಿಂದ ನಡೆದು, ಮುಂದೆ ಅದು ಯಾವ ಕಾರಣದಿಂದಲೋ ಬಂದಾಯಿತು. ಈಗ **ಶರಣಸಂದೇಶ**ವೆಂಬ ವಾರಪತ್ರಿಕೆಯು ಮಾತ್ರ ಹೊರಡುತ್ತಿದೆ ಈ ಊರಲ್ಲಿ ಒಂದು ಗುಡಿಯುಂಟು. ಇಲ್ಲಿ ಪೋಸ್ಟ ಆಫೀಸು ಅದೆ.

**ಮನಗೋಳಿ:**—ಈ ಊರು ಬಾಗೇವಾಡಿಯಿಂದ ಪಶ್ಚಿಮಕ್ಕೆ ೧೨ ಮೈಲಿನ ಮೇಲೆ ಅದೆ. ಇಲ್ಲಿ ರಾಮೇಶ್ವರ ದೇವರ, ಹನುಮಂತ ದೇವರ, ಬಸವೇಶ್ವರದೇವರ ಗುಡಿಗಳಿವೆ. ಹನುಮಂತದೇವರ ಗುಡಿಯಲ್ಲಿ ಹಳೆಯ ಲಿಪಿಗಳುಂಟು. ಅವು ಓದಲಿಕ್ಕೆ ಬರುವಂತಿಲ್ಲ. ರಾಮದೇವರ ಗುಡಿಯ ಬಳಿಯಲ್ಲಿ ಒಂದು ಗೋಳಿಪಲ್ಲೆಯ ಗಡ್ಡೆಯಿತ್ತು. ಅದನ್ನು ಕಿತ್ತು ತೂಕ ಮಾಡಲು ಅದು ೧ ಮಣವಾಯಿತಂತೆ. ಕಾರಣ ಈ ಗ್ರಾಮಕ್ಕೆ ಮನಗೋಳಿ ಅಂತಾ ಹೆಸರು ಬಂದಿದೆಯೆಂದು ಹೇಳುತ್ತಾರೆ. ಇದು ಒಕ್ಕಲತನದಿಂದ ಪ್ರಸಿದ್ಧವದೆ. ಇಲ್ಲಿ ಹತ್ತಿ ಅರೆಯುವ ಎರಡು ಗಿರಣಿಗಳುಂಟು.

**ಪ್ರಶ್ನೆಗಳು:**—ಬಾಗೇವಾಡಿ ತಾಲೂಕಿನ ಮೇರೆ ಹೇಳಿರಿ? ಈ ತಾಲೂಕಿನ ಜನಸಂಖ್ಯೆ ಎಷ್ಟು? ಈ ತಾಲೂಕಿನಲ್ಲಿ ಗುಡ್ಡಗಳು ಎಲ್ಲಿವೆ? ಮುಖ್ಯ ಉದ್ಯೋಗ ಯಾವದು? ದೊಡ್ಡ ಊರುಗಳಾವವು? ಶಿಂದಿ ಬನ, ಎಲೆಬಳ್ಳಿ ತೋಟಗಳು ಎಲ್ಲಿ ಅವೆ? ಜಾತ್ರೆಯಾಗುವ ಊರುಗಳಾವವು? ಬಾಗೇವಾಡಿಯಿಂದ ವಿಜಾಪುರಕ್ಕೆ ಹೋಗುವ ದಾರಿಯಲ್ಲಿ ಹತ್ತುವ ಊರುಗಳಾವವು? ಈ ತಾಲೂಕಿನಲ್ಲಿ ಸ್ಟೇಶನ್ನುಗಳಿದ್ದ ಊರುಗಳಾವವು? ಬಾಗೇವಾಡಿ ವಿಷಯಕ್ಕೆ ಗೊತ್ತಿದ್ದ ಸಂಗತಿ ಹೇಳಿರಿ? ಇಂಗಳೇಶ್ವರಕ್ಕೆ ಮೊದಲು ಏನು ಅನ್ನುತ್ತಿದ್ದರು? ಚಿನ್ಮಲಗಿ ಊರ ವಿಷಯಕ್ಕೆ ಹೇಳಿರಿ? ಮನಗೋಳಿ ಅಂತಾ ಹೆಸರು ಬರಲು ಕಾರಣವೇನು?

---

# ಮುದ್ದೇಬಿಹಾಳ ತಾಲೂಕು

**ಮೇರೆಗಳು:**— ಉತ್ತರಕ್ಕೆ ಸಿಂದಗಿ, ಬಾಗೇವಾಡಿ ತಾಲೂಕುಗಳು; ಪೂರ್ವಕ್ಕೆ ಮೊಗಲಾಯಿ ಇಲಾಖೆ; ದಕ್ಷಿಣಕ್ಕೆ ಕೃಷ್ಣಾನದಿ, ಅದರಾಚೆಯಲ್ಲಿ ಹುನಗುಂದ, ಬಾಗಲಕೋಟ ತಾಲೂಕುಗಳು; ಪಶ್ಚಿಮಕ್ಕೆ ಬಾಗೇವಾಡಿ ತಾಲೂಕು ಉಂಟು.

**ಸ್ಥಾನ:**— ಇದು ಜಿಲ್ಹೆಯ ಆಗ್ನೇಯ ಭಾಗದ ಮಧ್ಯದಲ್ಲಿ ಸಿಂದಗಿ ತಾಲೂಕಿನ ದಕ್ಷಿಣಕ್ಕೆ ಇರುತ್ತದೆ. ಇದರಲ್ಲಿ ೧೨ ಸರಕಾರಿ ಹಳ್ಳಿಗಳೂ, ೩೩ ದುಮಾಲಿ ಹಳ್ಳಿಗಳೂ ಅವೆ. ಕ್ಷೇತ್ರ ೫೬೪ ಚೌರಸ ಮೈಲು, ಜನಸಂಖ್ಯೆ ೪೦,೮೭೮, ತೆರಿಗೆ ೬೯,೮೩೪ ರೂಪಾಯಿಗಳುಂಟು.

**ಭೂಮಿಯ ಸ್ವರೂಪ:**—ಕೃಷ್ಣಾ, ಡೋಣಿ ನದಿಗಳ ತೀರದಲ್ಲಿ ಸಮಭೂಮಿಯಿದೆ. ಮಧ್ಯಭಾಗದ ಭೂಮಿಯು ಉಸುಕು, ಕಲ್ಲುಗಳಿಂದ ಕೂಡಿದಾಗ್ಯೂ ತಕ್ಕಮಟ್ಟಿಗೆ ಬೆಳೆ ಬರುವದು. ಇಲ್ಲಿ ಹಾಸಿಗೆ ಕಲ್ಲುಗಳೇ ಬಹಳ. ಈ ತಾಲೂಕಿನಲ್ಲಿ ಗುಡ್ಡಗಳಿಲ್ಲ. ಡೋಣಿ, ಕೃಷ್ಣಾಗಳ ಎಡಬಲಕ್ಕೆ ಮೇಲಾದ ಎರೆಭೂಮಿಯುಂಟು. ಉಳಿದ ಭಾಗವೆಲ್ಲ ಗರಸು ಭೂಮಿಯು.

**ಹವೆ, ಮಳೆ, ನೀರು, ಉದ್ಯೋಗ:**— ಈ ತಾಲೂಕಿನಲ್ಲಿ ವಿಜಾಪುರ, ಬಾಗೇವಾಡಿ ತಾಲೂಕುಗಳಲ್ಲಿಯಷ್ಟು ಶೆಕೆ ಇಲ್ಲ. ಮಳೆಯು ೧೦ರಿಂದ ೪೩ರ

ವರೆಗೆ ಅಂದರೆ ಸರಾಸರಿ ೨೩ ಇಂಚು ಆಗುವದು. ಉತ್ತರದಲ್ಲಿ ಡೋಣಿಗೂ, ದಕ್ಷಿಣದಲ್ಲಿ ಕೃಷ್ಣೆಗೂ ಕೂಡುವ ಹಳ್ಳಗಳು ಮಳೆಗಾಲ, ಚಳಿಗಾಲಗಳಲ್ಲಿ ಮಾತ್ರ ಹರಿಯುತ್ತವೆ. ಕೆರೆಗಳು ಕಡಿಮೆ. ಈ ತಾಲೂಕಿನಲ್ಲಿ ಬಹುತರ ವಾಗಿ ಒಕ್ಕಲತನವೇ ಮುಖ್ಯ ಉದ್ಯೋಗ. ವ್ಯಾಪಾರವು ತಕ್ಕಮಟ್ಟಿಗೆ ಆಗುವದು. ಇಲ್ಲಿಂದ ಹೌದಿನ ಕಲ್ಲು, ಬೀಸುವ ಕಲ್ಲು, ಸುಣ್ಣದ ಕಲ್ಲು, ಹಾಸಿಗೆ ಕಲ್ಲುಗಳಲ್ಲದೆ ಜಾಜೀಮು, ಕರಳೀಹಚ್ಚಡ, ಮುಂಡಾಸಗಳು, ನೀರಪಂಜೆಗಳು, ಕಾಳುಕಡಿ, ಹತ್ತಿ ಮೊದಲಾದ ಸಾಮಾನುಗಳು ಹೊರಗೆ ಹೋಗುತ್ತವೆ. ಈ ತಾಲೂಕಿನಲ್ಲಿಯ ದೊಡ್ಡ ಊರುಗಳು ಸ್ಟೇಶನ್ನಕ್ಕೆ ಸಮೀಪವಿಲ್ಲದ್ದರಿಂದ ವ್ಯಾಪಾರವು ತಕ್ಕಮಟ್ಟಿಗೆ ನಡೆಯುತ್ತದೆ.

**ದೊಡ್ಡ ಊರುಗಳು**:—ಮುದ್ದೇಬಿಹಾಳ, ತಾಳಿಕೋಟಿ, ನಾಲತವಾಡ, ಬಸರಕೋಡ, ಬಿದರಕುಂದಿ, ಢವಳಗಿ, ಆಲೂರ, ಇಂಗಳಗೇರಿ, ಹೇರೂರ, ಕಾಳಗಿ, ಕಂದಗನೂರ, ಕೊಡಗಾನೂರ, ಕೋಳೂರ, ಕೊಣ್ಣೂರ, ಕುಂಟೋಜಿ, ಮಡರಿ, ನಾವದಗಿ, ಪಡೆಕನೂರ, ರಕ್ಕಸಗಿ, ಸರೂರ, ಸಾಲವಾಡಿಗಿ, ತಮದಡ್ಡಿ, ತಂಗಡಗಿ, ತುಂಬಗಿ, ಎಲಗೂರು, ಹಿರೇಮುರನಾಳ.

**ಸಂತೆಯಾಗುವ ಊರುಗಳು**:—ಮುದ್ದೇಬಿಹಾಳ, ತಾಳಿಕೋಟಿ, ನಾಲತವಾಡ, ಢವಳಗಿ, ಹಿರೇಮುರನಾಳ, ತಂಗಡಗಿ.

**ಜಾತ್ರೆಯಾಗುವ ಊರುಗಳು**:—ಎಲಗೂರಲ್ಲಿ ಶ್ರೀ ಎಲಗೂರಪ್ಪನ (ಹನುಮಂತ ದೇವರ) ಜಾತ್ರೆ, ಬೂದಿಹಾಳದಲ್ಲಿ ಎಲ್ಲವ್ವನ ಜಾತ್ರೆ, ಕುಂಟೋಜಿಯಲ್ಲಿ ಬಸವೇಶ್ವರ ಜಾತ್ರೆ, ಖಾನಾಪುರ ಉರ್ಫ ಗಗನಾಪುರದಲ್ಲಿ ಮಾನಪ್ಪನ ಜಾತ್ರೆ, ತಂಗಡಗಿಯಲ್ಲಿ ಅಕ್ಕನಾಗಮ್ಮನ ಉತ್ಸವ.

**ಪೋಷ್ಟ ಇದ್ದ ಊರುಗಳು**:—ಮುದ್ದೇಬಿಹಾಳ, ತಾಳಿಕೋಟಿ, ನಾಲತವಾಡ, ತಂಗಡಗಿ, ಕೊಣ್ಣೂರ.

**ತಾರ ಆಫೀಸ ಇದ್ದ ಊರುಗಳು**:-ಮುದ್ದೇಬಿಹಾಳ, ತಾಳಿಕೋಟಿ.

**ಪೋಲೀಸ ಗ್ಯಾಟ ಇದ್ದ ಊರುಗಳು**:— ಮುದ್ದೇಬಿಹಾಳದಲ್ಲಿ ಠಾಣಾಪೋಸ್ತ. ತಾಳಿಕೋಟಿ, ನಾಲತವಾಡ, ಕುಂಚಕನೂರ, ತಂಗಡಿಯಲ್ಲಿ ಪೋಸ್ತ ಉಂಟು.

## ಹೊಳಿ-ಹಳ್ಳಗಳು

**ಕೃಷ್ಣಾ ನದಿಯು:**—ಇದು ಈ ತಾಲೂಕಿನ ದಕ್ಷಿಣ ಭಾಗದಲ್ಲಿ ಹರಿದು, ಮೊಗಲಾಯಿ ಇಲಾಖೆಯಲ್ಲಿ ಸೇರಿದೆ. ಇದರ ಥಡದಲ್ಲಿದ್ದ ಊರು ಗಳು:—ಎಲಗೂರು, ಮಸೂತಿ, ಕಾಳಗಿ, ಕುಂಚಕನೂರ, ತಂಗಡಗಿ, ರಕ್ಕಸಗಿ.

**ಡೋಣಿ:**—ಬಾಗೇವಾಡಿ ಸಿಂದಗಿ ತಾಲೂಕಿನ ಮೇರೆಯಲ್ಲಿ ಹರಿದು ಈ ತಾಲೂಕಿನ ವಾಯವ್ಯದಲ್ಲಿ ಹರಿದು ಮುಂದೆ ಮೊಗಲಾಯಿ ಇಲಾಖೆಯಲ್ಲಿ ಸೇರಿದೆ. ಇದರ ಥಡದಲ್ಲಿ ತಾಳಿಕೋಟಿ ಉಂಟು.

## ಲೈನಮಾರ್ಗಗಳು

**ಮುದ್ದೇಬಿಹಾಳದಿಂದ ಹೂವಿನಹಿಪ್ಪರಗಿ ಮಾರ್ಗ:**—ಬಿದರ ಕುಂದಿ, ಢವಳಗಿಗಳ ಮೇಲಿಂದ ಹೋಗಿದೆ.

**ಮುದ್ದೇಬಿಹಾಳದಿಂದ ತಾಳಿಕೋಟೆ ಮಾರ್ಗ:**—ಕುಂಟೋಜಿ, ಹುಲಗಬಾಳ, ಮೂಕಿಹಾಳಗಳ ಮೇಲಿಂದ ಹೋಗಿದೆ.

**ಮುದ್ದೇಬಿಹಾಳದಿಂದ ನಾಲತವಾಡ ಮಾರ್ಗ:**—ಹಿರೇಮುರ ನಾಳ ಮೇಲಿಂದ ಹೋಗಿದೆ.

**ಮುದ್ದೇಬಿಹಾಳದಿಂದ ಆಲಮಟ್ಟಿ ಸ್ಟೇಶನ್ ಮಾರ್ಗ:**—ಗೆದ್ದಲಮರಿ, ಹುಲ್ಲೂರಗಳ ಮೇಲಿಂದ ಹೋಗಿದೆ.

## ಊರುಗಳ ವಿಶೇಷ ವರ್ಣನೆ

**ಮುದ್ದೇಬಿಹಾಳ:**—ವಿಜಾಪುರದಿಂದ ಆಗ್ನೇಯಕ್ಕೆ ೪೫ ಮೈಲಿನ ಮೇಲೆ ಇರುತ್ತದೆ. ಇದು ತಾಲೂಕಿನ ಮುಖ್ಯ ಗ್ರಾಮವು. ಮುನಸೂಫ ಕೋರ್ಟು, ಮಾಮಲೇದಾರ ಕಚೇರಿ, ದವಾಖಾನೆಗಳುಂಟು. ಈ ಊರನ್ನು ಬಸರಕೋಡದಲ್ಲಿಯ ಈಗಿನ ನಾಡಗೌಡರ ಮೂಲಪುರುಷನಾದ ಪರಮಣ್ಣ ನೆಂಬವನು ಸನ್ ೧೬೮೦ರಲ್ಲಿ ಕಟ್ಟಿಸಿದನಂತೆ. ಹಳ್ಳದ ಪೂರ್ವಕ್ಕೆ ಪರ್ವತಗಿರಿ ಎಂಬ ಹಳ್ಳಿಯು, ಪಶ್ಚಿಮಕ್ಕೆ ಮುದ್ದೇಬಿಹಾಳವು ಉಂಟು. ವ್ಯಾಪಾರವು ತಕ್ಕಮಟ್ಟಿಗೆ ಆಗುತ್ತದೆ. ಇಲ್ಲಿಯ ಪಂಜಿಗಳು ಪ್ರಸಿದ್ಧ.

**ನಾಲತವಾಡ**:—ಮುದ್ದೇಬಿಹಾಳದ ಆಗ್ನೇಯಕ್ಕೆ ೧೩ ಮೈಲಿನ ಮೇಲೆ ಅದೆ. ಇಲ್ಲಿ ೩ ೪ ಲಿಪಿಗಳುಂಟು. ಒಂದು ಲಿಪಿಯು ಮಾತ್ರ ಚಾಲುಕ್ಯರ ಜಗದೇಕಮಲ್ಲನು ಬರೆಸಿದ್ದಿರುತ್ತದೆ. ಈ ಊರಲ್ಲಿ ಹಿಂದಕ್ಕೆ ವೀರಯ್ಯನೆಂಬ ಶಿವಶರಣರು ಆಗಿಹೋದರು. ಅವರು ವರವಿ ಪುರುಷರು. ಅನೇಕ ಪವಾಡಗಳನ್ನು ತೋರಿಸಿ, ಶಿವೈಕ್ಯರಾದರೆಂದು ಹೇಳುವರು.

**ತಾಳಿಕೋಟಿ**:—ಮುದ್ದೇಬಿಹಾಳದ ಈಶಾನ್ಯಕ್ಕೆ ೧೫ ಮೈಲಿನ ಮೇಲೆ ಡೋಣಿ ನದಿಯ ಧಡದಲ್ಲಿದೆ. ಸನ್ ೧೬೫೦ರಲ್ಲಿ ಬಾಳಾಜಿ ಬಾಜೀರಾವ ಪೇಶ್ವೆಯು ಈ ಊರನ್ನು ತನ್ನ ಬೀಗನಾದ ಆನಂದರಾವ ರಾಸ್ತೆ ಎಂಬವನಿಗೆ ಸರಂಜಾಮಿಯಾಗಿ ಕೊಟ್ಟನು. ಅವನು ಇಲ್ಲಿ "ಆನಂದರಾವ ಪೇಟೆ", "ಕೈಲಾಸ ಪೇಟೆ"ಗಳನ್ನು ಕಟ್ಟಿಸಿದನು. ಪೇಶ್ವೆಯ ರಾಜ್ಯವು ಹಾಳಾದ ಬಳಿಕ ಇಲ್ಲಿ ಬಾಳಾಸಾಹೇಬ ರಾಸ್ತೆ ಎಂಬವನು ಇರುತ್ತಿದ್ದನು. ಈ ಊರಲ್ಲಿ ಪುರಾತನಕಾಲದ್ದೊಂದು ಈಶ್ವರ ಗುಡಿಯಿದೆ. ಪಂಚಪೀರ ಎಂಬ ಹೆಸರಿನ ಮಸೀದೆ ಉಂಟು.

ವಿಜ್ಞಯನಗರದ ರಾಮರಾಜನಿಗೂ, ವಿಜಾಪುರದ ಬಾದಶಹನಾದ ಅಲ್ಲಿಆದಿಲಶಹನಿಗೂ ಆದ ಯುದ್ಧವು ತಾಳಿಕೋಟೆಯ ದಕ್ಷಿಣಕ್ಕೆ ೩೦ ಮೈಲಿನ ಮೇಲೆ ಸಂಭವಿಸಿತು. ಬಾದಶಹನು ಇಲ್ಲಿಯೇ ವಸತಿ ಹಾಕಿದ್ದರಿಂದ ಆ ಯುದ್ಧಕ್ಕೆ "ತಾಳಿಕೋಟೆ ಯುದ್ಧ"ವೆಂದೆನ್ನುವರು. ಇದೇ ಊರಲ್ಲಿ ಕೆಲವು ದಿನಗಳ ಹಿಂದೆ ಖಾಸಗತ ಸ್ವಾಮಿಗಳೆಂಬವರು ಆಗಿ ಹೋದರು. ಅವರು ದೊಡ್ಡ ಯೋಗಿಗಳಿದ್ದರು. ಅವರ ಗದ್ದಿಗೆಯನ್ನು ಸಂಗಮುರವರಿ ಕಲ್ಲಿನಿಂದ ಕಟ್ಟಿಸಿದ್ದಾರೆ. ಆ ಗದ್ದಿಗೆಯೂ ಮತ್ತು ಮಠವೂ ನೋಡತಕ್ಕಂಥವುಗಳು. ಇಲ್ಲಿ ಹೌದಿನ ಕಲ್ಲುಗಳೂ, ಜಾಜಮುಗಳೂ, ಕರಳೆ ಹಚ್ಚಡಗಳೂ ತಯಾರಾಗುತ್ತವೆ. ಈ ಊರ ಪಗಡಿಬಾಜಾರವು ನೋಡತಕ್ಕಂತಹದಿದೆ.

**ಎಲಗೂರು**:—ಮುದ್ದೇಬಿಹಾಳದ ಪಶ್ಚಿಮಕ್ಕೆ ೧೩ ಮೈಲಿನ ಮೇಲೆ ಕೃಷ್ಣಾನದಿಯ ಧಡದಲ್ಲುಂಟು. ಇಲ್ಲಿ ಹನುಮಂತದೇವರ ಗುಡಿಯು ಬಹಳ ಪ್ರಸಿದ್ಧ ಉಂಟು. ಇದು ಬಹು ಭದ್ರವುಳ್ಳದ್ದೂ, ವಿಸ್ತಾರವುಳ್ಳದ್ದೂ ಅದೆ.



ಎಲಗೂರ ಶ್ರೀಮಾರುತಿ ದೇವರು

ಈ ಗುಡಿಯನ್ನು ಸರದೇಸಾಯಿ ಎಂಬವನು ಕಟ್ಟಿಸಿದನೆಂದು ಹೇಳುವರು. ಈ ಊರ ಸುತ್ತುಮುತ್ತಲಿನ ಏಳು ಹಳ್ಳಿಗಳಿಗೆ ಇವನೊಬ್ಬನೇ ದೇವನಿರುವದರಿಂದ ಇವನಿಗೆ ಏಳೂರಪ್ಪನೆಂದೂ, ಎಲಗೂರಪ್ಪನೆಂದೂ ಅನ್ನುವರು.

**ತುಂಬಗಿ:—** ಇದು ಮುದ್ದೇಬಿಹಾಳದಿಂದ ಈಶಾನ್ಯಕ್ಕೆ ೨೫ ಮೈಲಿನ ಮೇಲಿದೆ. ಇಲ್ಲಿ ಚಾಲುಕ್ಯರ ಆಳಿಕೆಯಲ್ಲಿ ಅಂದರೆ ೧೧ನೆಯ ಶತಮಾನದಲ್ಲಿ ಬರೆಯಿಸಿದ ಎರಡು ಲಿಪಿಗಳಿವೆ. ಅವುಗಳಲ್ಲೊಂದು ಹನುಮಂತದೇವರ ಗುಡಿಯಲ್ಲಿಯೂ, ಇನ್ನೊಂದು ಪೋಲೀಸ ಚೌಕಿಯಲ್ಲಿಯೂ ಉಂಟು.

**ಕುಂಟೋಜಿ**:—ಮುದ್ದೇಬಿಹಾಳ ಈಶಾನ್ಯಕ್ಕೆ ೨ ಮೈಲಿನ ಮೇಲೆ ಅದೆ. ಇಲ್ಲಿಯ ಬಸವೇಶ್ವರ ಗುಡಿಯಲ್ಲಿ ಸವೆದದ್ದೊಂದು ಲಿಪಿಯುಂಟು.

**ಬಸರಕೋಡ**:—ಮುದ್ದೇಬಿಹಾಳದಿಂದ ೬ ಮೈಲಿನ ಮೇಲೆ ಅದೆ. ಇಲ್ಲಿ ಜೈನರ ಒಂದು ಬಸ್ತಿ ಅದೆ. ಮಲ್ಲಿಕಾರ್ಜುನ, ಮೂರ್ಲಿಂಗ ಎಂಬ ಗುಡಿಗಳೂ, ಒಂದೆರಡು ಲಿಪಿಗಳೂ ಉಂಟು.

**ತಂಗಡಗಿ**:—ಮುದ್ದೇಬಿಹಾಳದಿಂದ ೧೨ ಮೈಲಿನ ಮೇಲೆ ಅದೆ. ಬಸವಣ್ಣನವರು ಕಲ್ಯಾಣವನ್ನು ಬಿಟ್ಟು ಸಂಗಮಕ್ಕೆ ಹೋದರೆಂದು ತಿಳಿದು ನೀಲಮ್ಮನವರೂ ಸಹ ಕಲ್ಯಾಣ ಬಿಟ್ಟು ಬಂದರು. ಅವರು ಈ ಊರಲ್ಲಿ ಶಿವಪೂಜೆಗೆ ಕೂತಕಾಲಕ್ಕೆ ಬಸವಣ್ಣನವರು ಸಂಗಮನಾಥನಲ್ಲಿ ಐಕ್ಯರಾದರೆಂಬ ಸುದ್ದಿಯನ್ನು ಕೇಳಿ, ತಾವೂ ಇಲ್ಲಿಯೇ ಐಕ್ಯರಾದರು. ಸಂಗಮನಾಥನ ತಂಗಿಯು ಈ ಊರಲ್ಲಿ ಐಕ್ಯವಾದ್ದರಿಂದ ಇದಕ್ಕೆ ತಂಗಡಗಿ ಎಂದೆನ್ನುವರು.

**ಪ್ರಶ್ನೆಗಳು**:—ಮೇರೆಗಳಾವವು? ಹವೆ, ಮಳೆ ಸಂಬಂಧಿ ಗೊತ್ತಿದ್ದುದನ್ನು ಹೇಳಿರಿ? ಇಲ್ಲಿಂದ ಹೊರಗೆ ಹೋಗುವ ಸಾಮಾನುಗಳಾವವು? ದೊಡ್ಡ ಊರುಗಳು ಮತ್ತು ತಾರ ಆಫೀಸು ಇದ್ದ ಊರುಗಳು ಯಾವವು? ಆಲಮಟ್ಟಿಯಿಂದ ತಾಳಿಕೋಟೆಗೆ ಹೋಗುವ ಮಾರ್ಗದಲ್ಲಿ ಹತ್ತುವ ಊರುಗಳಾವವು? ಮುದ್ದೇಬಿಹಾಳದ ವರ್ಣನೆ ಹೇಳಿರಿ? ತಾಳಿಕೋಟೆಯ ವಿಷಯಕ್ಕೆ ಗೊತ್ತಿದ್ದುದನ್ನು ಹೇಳಿರಿ? ಎಲಗೂರು ಅಂತಾ ಹೆಸರು ಬರಲು ಕಾರಣವೇನು? ಇಲ್ಲಿ ಯಾವ ದೇವರ ಜಾತ್ರೆಯಾಗುವದು? ತಂಗಡಗಿ ಎಲ್ಲಿ ಅದೆ? ಅದಕ್ಕೆ ಈ ಹೆಸರು ಬರಲು ಕಾರಣವೇನು?

---

## ಬಾಗಲಕೋಟೆ ತಾಲೂಕು

**ಮೇರೆಗಳು**:—ಉತ್ತರಕ್ಕೆ ಕೃಷ್ಣಾನದಿಯು, ಅದರಾಚೆಯಲ್ಲಿ ಬಾಗೇವಾಡಿ, ಮುದ್ದೇಬಿಹಾಳ ತಾಲೂಕುಗಳು; ಪೂರ್ವಕ್ಕೆ ಹುನಗುಂದ ತಾಲೂಕು; ದಕ್ಷಿಣಕ್ಕೆ ಬದಾಮಿ ತಾಲೂಕು; ಪಶ್ಚಿಮಕ್ಕೆ ಮುಧೋಳ, ಜವಖಿಂಡಿ ಜಹಾಗೀರುಗಳುಂಟು.

**ಸ್ಥಾನ:**— ಈ ತಾಲೂಕು ಕೃಷ್ಣೆಯ ದಕ್ಷಿಣ ಮೇರೆಯಾಗಿ ಹಬ್ಬಿದೆ. ಇದರಲ್ಲಿ ೧೬೧ ಸರಕಾರಿ ಹಳ್ಳಿಗಳೂ, ೩೯ ದುಮಾಲಿ ಹಳ್ಳಿಗಳೂ ಉಂಟು. ಕ್ಷೇತ್ರ ೬೮೩ ಚೌರಸ ಮೈಲು, ಜನಸಂಖ್ಯೆ ೧೯,೦೦೪, ತೆರಿಗೆ ೧,೨೩,೧೯೯ ರೂಪಾಯಿಗಳು.

**ಭೂಮಿಯ ಸ್ವರೂಪ:**— ಕೃಷ್ಣಾನದಿಯ ಎಡಬಲದಲ್ಲಿ ಮೇಲಾದ ಎರೆಭೂಮಿಯಿದೆ. ಬಹುತರವಾಗಿ ಈ ತಾಲೂಕಿನಲ್ಲಿ ಇದೇ ಪ್ರಕಾರದ ಭೂಮಿಯುಂಟು. ಅಲ್ಲಲ್ಲಿ ಸ್ವಲ್ಪ ಗುಡ್ಡಗಳಿವೆ. ಗುಡ್ಡಗಳ ನೆರೆಯಲ್ಲಿ ಕೆಂಪು ಭೂಮಿಯನ್ನು ಕಾಣಬಹುದು.

**ಹವೆ, ಮಳೆ, ನೀರು:**— ಹವೆಯು ಆರೋಗ್ಯಕರವಾದದ್ದು. ಗುಡ್ಡ, ಹೊಳೆಗಳ ನೆರೆಯಲ್ಲಿ ಮಳೆ ಹೆಚ್ಚು; ಉಳಿದ ಕಡೆಗೆ ಸಾಧಾರಣ. ಬಾಗಲಕೋಟೆಯಲ್ಲಿ ೨-೪೦ ಇಂಚಿನ ವರೆಗೆ ಸರಾಸರಿ ೨೨ ಇಂಚು ಮಳೆಯಾಗುವದು. ಈ ತಾಲೂಕಿಗೆ ನೀರಿನ ಅರಬು ಬಹಳ. ಘಟಪ್ರಭಾ, ಕೃಷ್ಣಾ ಇವೆರಡೇ ನದಿಗಳು ನೀರಿನ ಮುಖ್ಯ ಆಧಾರಗಳಾಗಿರುವವು. ಈ ಹೊಳೆಗಳ ದಂಡೆಯಲ್ಲಿಯೇ ಹಳ್ಳಿಗಳು ಬಹಳ. ಕೆಲವು ಜನರು ಈ ನದಿಗಳ ಎಡಬಲದಲ್ಲಿ ಉತ್ತಮ ತೋಟಗಳನ್ನು ಮಾಡಿಕೊಂಡಿರುವರು.

## ನದಿಗಳು ಮತ್ತು ಹಳ್ಳಿಗಳು

**ಕೃಷ್ಣಾ:**— ಈ ನದಿಯು ತಾಲೂಕಿನ ಉತ್ತರಭಾಗದಲ್ಲಿ ಹರಿದು, ಮುದ್ದೇಬಿಹಾಳ, ಹುನಗುಂದ ತಾಲೂಕುಗಳಲ್ಲಿ ಸೇರಿದೆ. ಇದರ ದಂಡೆಯಲ್ಲಿದ್ದ ಊರುಗಳು: ಗಲಗಲಿ, ಬಾಡಗಿ, ಸೊನ್ನ, ಕೊರ್ತಿ, ರೊಳ್ಳಿ, ಹಿರೇಗುಳಬಾಳ, ಹೊಸೂರ, ನಾಯಿನೇಗಲಿ, ಮಂಕಣಿ, ಬೊಮ್ಮಣಗಿ, ಹಿರೇಮ್ಯಾಗೇರಿ.

**ಘಟಪ್ರಭಾ:**— ಈ ನದಿಯು ಈ ತಾಲೂಕಿನ ಮಧ್ಯಭಾಗದಲ್ಲಿ ಹರಿದು, ಹಿರೇಗುಳಬಾಳ ಹತ್ತರ ಕೃಷ್ಣೆಗೆ ಕೂಡಿದೆ. ಇದರ ದಂಡೆಯಲ್ಲಿದ್ದ ಊರುಗಳು:— ಕಲಾದಗಿ, ಕುಂದರಗಿ, ಮುರನಾಳ, ಬಾಗಲಕೋಟ, ಹೆರಕಲ್ಲ, ಬೆಣ್ಣೂರ, ಕಂದಗಲ್ಲ.

**ಕೆರೆ ಇದ್ದ ಊರುಗಳು:**— ಮುಚಖಂಡಿ, ಶಿರೂರ.

**ಜಾತ್ರೆಯಾಗುವ ಊರುಗಳು:**—ಸೀತಿಮನಿಯಲ್ಲಿ ಧರ್ಮರ ಜಾತ್ರೆ; ಮುಚಖಂಡಿಯಲ್ಲಿ ವೀರಣ್ಣದೇವರ ಜಾತ್ರೆ; ಹಳ್ಳೂರ, ಬಾಗಲಕೋಟಗಳಲ್ಲಿ



**ಮುಚಖಂಡಿಯ ಶ್ರೀವೀರಭದ್ರದೇವರು**

ಶ್ರೀಬಸವೇಶ್ವರ ಜಾತ್ರೆ; ಬೀಳಗಿಯಲ್ಲಿ ದರ್ಗಾದ ಉರುಸು; ತುಳಸಿಗೇರಿಯಲ್ಲಿ ಹನುಮಂತದೇವರ ಜಾತ್ರೆ; ಮುರನಾಳದಲ್ಲಿ ಮಾನಪ್ಪಯ್ಯನ ಜಾತ್ರೆ.

**ಸಂತೆಯಾಗುವ ಊರುಗಳು:**— ಬಾಗಲಕೋಟ, ಬೀಳಗಿ, ನಾಗರಾಳ, ಗಿರಸಾಗರ, ಕಲಾದಗಿ, ಗಲಗಲಿ, ಶಿರೂರ.

**ದೊಡ್ಡ ಊರುಗಳೂ ಸಾಲೆಗಳಿದ್ದ ಊರುಗಳೂ**:—ಬಾಗಲಕೋಟ, ಕಲಾದಗಿ, ಬೀಳಗಿ, ಶಿರೂರ, ಗಲಗಲಿ, ಬಾಡಗಿ, ಬೆನಕಟ್ಟಿ, ಬೇವೂರ, ಹಳ್ಳೂರ, ಬೆಣ್ಣೂರ, ಭಗವತಿ, ಅರಕೇರಿ, ಚಿಕ್ಕಶೆಲ್ಲಿಕೇರಿ, ಗಿರಸಾಗರ, ಹೆರಕಲ್ಲ, ಚಿಕ್ಕಆಲಗುಂಡಿ, ಜಾನಮಟ್ಟಿ, ಖಜ್ಜಿಡೋಣಿ, ಕುಂದರಗಿ, ಮುರನಾಳ, ನಾಗರಾಳ, ಸಿಮಿಕೇರಿ, ಸಿದ್ದಾಪುರ, ಸೊನ್ನ, ಸುನಗ, ತೋಳಮಟ್ಟಿ, ತುಳಸಿಗೇರಿ, ತುಮ್ಮರಮಟ್ಟಿ, ರೊಳ್ಳಿ, ಅನಗವಾಡಿ.

**ಪೋಸ್ಟ ಇದ್ದ ಊರುಗಳು**:—ಬಾಗಲಕೋಟ, ಶಿರೂರ, ಬೀಳಗಿ, ಕಲಾದಗಿ, ಬೇವೂರ, ಗಲಗಲಿ, ಭಗವತಿ, ಗಿರಸಾಗರ.

**ತಾರ ಆಫೀಸ ಇದ್ದ ಊರುಗಳು**:—ಬಾಗಲಕೋಟ, ಕಲಾದಗಿ.

**ಪೋಲೀಸಗ್ಯಾಟ** ಇದ್ದ ಊರುಗಳು:—ಬಾಗಲಕೋಟ, ಬೀಳಗಿಗಳಲ್ಲಿ ಠಾಣಾಪೋಸ್ತ. ಕಲಾದಗಿ, ಸಿಮಿಕೇರಿ, ಬೇವೂರ, ಶಿರೂರ, ಗಲಗಲಿ, ಆಲಗುಂಡಿ, ರೊಳ್ಳಿಗಳಲ್ಲಿ ಪೋಸ್ತ ಉಂಟು.

**ಸ್ಟೇಶನ್ ಇದ್ದ ಊರುಗಳು**:—ಬಾಗಲಕೋಟ, ಕಡ್ಲಿಮಟ್ಟಿ, ಸೀತಿಮನಿ.

## ಲೈನ ಮಾರ್ಗಗಳು

**ಬಾಗಲಕೋಟಿಯಿಂದ ಬೆಳಗಾಂವ ಮಾರ್ಗ**:—ಗದ್ದನಕೇರಿ, ತುಳಸಿಗೇರಿ, ಕಲಾದಗಿಗಳ ಮೇಲಿಂದ ಹೋಗಿದೆ.

**ಬಾಗಲಕೋಟಿಯಿಂದ ಹುನಗುಂದ ಮಾರ್ಗ**:— ಶಿರೂರದ ಮೇಲಿಂದ ಹೋಗಿದೆ.

**ಸೊಲ್ಲಾಪುರದಿಂದ ಹುಬ್ಬಳ್ಳಿ ಮಾರ್ಗ**:—ಕೊರ್ತಿ, ಸುನಗ, ಅನಗವಾಡಿ, ಎಡಹಳ್ಳಿ, ಸಿಮಿಕೇರಿಗಳ ಮೇಲಿಂದ ಹೋಗಿದೆ.

**ಬಾಗಲಕೋಟಿಯಿಂದ ಜಮಖಂಡಿ ಮಾರ್ಗ**:—ಗದ್ದನಕೇರಿ, ಎಡಹಳ್ಳಿ, ಅನಗವಾಡಿ, ಬೀಳಗಿ, ಸಿದ್ದಾಪುರ, ತೆಗ್ಗಿ, ಗಲಗಲಿಗಳ ಮೇಲಿಂದ ಹೋಗಿದೆ.

**ಬಾಗಲಕೋಟಿಯಿಂದ ಸಂಗಮ ಮಾರ್ಗ**:—ಭಗವತಿ, ಹಳ್ಳೂರ, ಬೇವೂರಗಳ ಮೇಲಿಂದ ಹೋಗಿದೆ.

## ಊರುಗಳ ವಿಶೇಷ ವರ್ಣನೆ

**ಬಾಗಲಕೋಟೆ:**-ವಿಜಾಪುರದಿಂದ ೫೬ ಮೈಲಿನ ಮೇಲೆ ಘಟಪ್ರಭಾ ನದಿಯ ದಂಡೆಯ ಮೇಲೆ ಅದೆ. ಇದು ತಾಲೂಕಿನ ಮುಖ್ಯ ಗ್ರಾಮವು. ಇಲ್ಲಿ ಮಾಮಲೇದಾರರ ಕಚೇರಿ, ಮುನಸೂಫ ಕೋರ್ಟ, ದವಾಖಾನೆ, ಮುನಸಿಪಾಲಿಟಿ ಆಫೀಸ, ಹಾಯಸ್ಕೂಲುಗಳು, ಬ್ಯಾಂಕುಗಳು ಇರುವವಲ್ಲದೆ ಜೂನ ೧೯೪೨ರಿಂದ **ಶ್ರೀಬಸವೇಶ್ವರ ವಿದ್ಯಾವರ್ಧಕ ಸಂಘದವರು** ಪ್ರಾಥಮಿಕ ಶಿಕ್ಷಕರ ಟ್ರೇನಿಂಗ ಕಾಲೇಜವನ್ನು ಪ್ರಾರಂಭಿಸಿದ್ದಾರೆ. ಇಲ್ಲಿ ಉಗಿಬಂಡಿಯ ಸ್ಟೇಶನವಿದ್ದು, ವ್ಯಾಪಾರಕ್ಕೆ ತಕ್ಕ ಸ್ಥಳವಾಗಿದೆ. ಅರಳೆ, ಬೆಳ್ಳಿ, ಬಂಗಾರ, ರೇಶ್ಮಿ, ಕಾಳುಕಡಿಗಳ ವ್ಯಾಪಾರವು ಚನ್ನಾಗಿ ಆಗುತ್ತದೆ. ವ್ಯಾಪಾರಕ್ಕೆ ಕರ್ನಾಟಕದಲ್ಲಿ ಹುಬ್ಬಳ್ಳಿ ತರುವಾಯ ಇದೊಂದೇ ಹೆಸರಾಗಿರುವದು. ಇಲ್ಲಿ ಹತ್ತಿ ಅರೆಯುವ ಗಿರಣಿಗಳು, ಅರಳೆ ಗಂಟುಕಟ್ಟುವ ಜೀನುಗಳು, ಸೇಂಗಾ ಒಡೆಯುವ ಮಶಿನ್ನುಗಳು ಉಂಟು. ಮೊದಲು ಕಿಲ್ಲೆಯ ಸುತ್ತುಮುತ್ತು ಕೋಟೆ, ಕಂದಕಗಳಿದ್ದವು. ಆದರೆ ಅವು ಈಗ ಹಾಳಾಗಿ ಹೋಗಿರುತ್ತವೆ. ಈ ಊರಲ್ಲಿ ಹಳೆಪೇಟೆ, ಹೊಸಪೇಟೆ, ಜೈನ ಪೇಟೆಗಳೆಂದು ಮೂರು ಮುಖ್ಯ ಪೇಟೆಗಳುಂಟು. ಹಳೆಪೇಟೆಯು ಬಹು ಪುರಾತನದ್ದು. ಜೈನಪೇಟೆಯನ್ನು ಸವನೂರ ನವಾಬರ ಆಳಿಕೆಯಲ್ಲಿ (೧೬೬೪-೧೭೫೫) ಕಟ್ಟಿಸಿದರು. ಹೊಸಪೇಟೆಯನ್ನು ೧೭೯೧ರಲ್ಲಿ ಜೈನರಿಗೂ ಲಿಂಗಾಯತರಿಗೂ ಜಗಳ ಹುಟ್ಟಿದ್ದರಿಂದ, ಲಿಂಗಾಯತರು ಕಟ್ಟಿಸಿದರು. ಇವಲ್ಲದೆ ಕೌಲಪೇಟೆಯು ಆನಂದರಾವ ರಾಸ್ತೆ ಇವರ ಆಳಿಕೆಯಲ್ಲಿ ಕಟ್ಟಲ್ಪಟ್ಟಿತು. ಗೋಪಾಳಪುರವೆಂಬುದು ೧೮೪೫ರಲ್ಲಿ ಉಂಟಾಯಿತು. ವೆಂಕಟ-ಪೇಟೆಯನ್ನು ರಾವಬಹಾದ್ದೂರ ತಿರುಮಲರಾವ ಇನಾಮದಾರರು ಸನ್ ೧೮೫೬ರಲ್ಲಿ ಸ್ಥಾಪಿಸಿದರು.

ಈ ಊರು ಮೊದಲು ರಾವಣನ ಬಜಂತ್ರಿ ಗ್ರಾಮವಿತ್ತೆಂದು ಹೇಳುತ್ತಾರೆ. ಆದ್ದರಿಂದ ಇದು ಪೂರ್ವಕಾಲದ್ದೆಂದು ತೋರುತ್ತದೆ. ಇದು ಇತಿಹಾಸ ಪ್ರಸಿದ್ಧವಾದ ಗ್ರಾಮವು. ಮೊದಲು ಈ ಊರು ವಿಜಯನಗರಕ್ಕೆ ಸೇರಿತ್ತು. ನಂತರ ವಿಜಾಪುರ ರಾಜ್ಯಕ್ಕೆ ಸೇರಿ, ಸವನೂರ ನವಾಬನ ವಶಕ್ಕೆ

ಹೋಯಿತು (೧೬೬೪–೧೭೫೫). ಆಮೇಲೆ ಹೈದರಅಲ್ಲಿ ಮತ್ತು ಪೇಶ್ವೆಯರ ಕೈಸೇರಿತು. ಮುಂದೆ ರಾಸ್ತೇನ ಜಹಾಗೀರದೊಳಗೆ ಕೂಡಿತು. ರಾಸ್ತೇನ ಆಳಿಕೆಯಲ್ಲಿ ಇಲ್ಲಿ ಟಂಕಸಾಲಿ ಇತ್ತು. ವಿಜಾಪುರದ ಬಾದಶಹರು ಇದನ್ನು ತಮ್ಮ ಮಗಳ ಬಳೆಯ ವೆಚ್ಚಕ್ಕಾಗಿ ಇನಾಮು ಹಾಕಿಕೊಟ್ಟರೆಂದು ವದಂತಿ ಅದೆ. (ಮುಸಲ್ಮಾನಿ ಭಾಷೆಯಲ್ಲಿ ಬಾಂಗಡಿ ಅಂದರೆ ಬಳೆ ಎಂದು ಅರ್ಥ.) ಆದ್ದರಿಂದ ಇದಕ್ಕೆ ಬಾಂಗಡಿಕೋಟಿ ಎಂದು ಹೆಸರು ಬಿತ್ತು. ಈಗ ರೂಢಿಯಲ್ಲಿ ಬಾಗಲಕೋಟಿಯೆಂದು ಕರೆಯುತ್ತಾರೆ.

**ಬೀಳಗಿ**:—ಬಾಗಲಕೋಟಿಯಿಂದ ವಾಯುವ್ಯಕ್ಕೆ ೧೮ ಮೈಲಿನ ಮೇಲೆ ಅದೆ. ಇಲ್ಲಿ ಮಹಾಲಕರಿ ಕಚೇರಿ ಅದೆ. ಈ ಊರಲ್ಲಿ ಸುಮಾರು ಮುನ್ನೂರು ವರುಷಗಳ ಹಿಂದೆ ಕಟ್ಟಿಸಿದ ಗುಡಿಗಳೂ, ಭಾವಿಗಳೂ ಉಂಟು. ಊರ ಮಗ್ಗಲಿಗೆ ಆರೆತ್ತಿನ ಭಾವಿಯೆಂಬುವದು ೧೫೦ ಫೂಟು ಉದ್ದ, ೭೫ ಫೂಟು ಅಗಲವಿದೆ. ಈ ಭಾವಿಯೊಳಗೊಂದು ಈಶ್ವರನ ಗುಡಿಯುಂಟು. ಅದರಲ್ಲಿ ಕನ್ನಡ, ಸಂಸ್ಕೃತ, ಪರ್ಶಿಯನ್ ಭಾಷೆಗಳಲ್ಲಿ ಬರೆದ ಲಿಪಿಗಳಿವೆ. ಈ ಭಾವಿಯನ್ನು ಮಾಧವಜೀ ವಿಸಾಜೀ ಎಂಬವನು ಸನ್ ೧೭೦೮ರಲ್ಲಿ ಕಟ್ಟಿಸಿದನೆಂದು ಆ ಲಿಪಿಗಳಲ್ಲಿ ಬರೆದಿದೆ.

ಊರೊಳಗಿನ ಅರಸರ ಭಾವಿಯಲ್ಲಿಯೂ ಲಿಪಿಗಳಿವೆ. ಊರ ಹತ್ತರ ಸುಮಾರು ೧ ಮೈಲಿನ ಮೇಲೊಂದು ಸಿದ್ಧೇಶ್ವರನ ಗುಡಿಯುಂಟು. ಅದರ ಬಳಿಯಲ್ಲಿದ್ದ ಹೊಂಡದಲ್ಲಿ ಗುಡ್ಡದೊಳಗಿಂದ ನೀರು ಹರಿದುಬಂದು ಬೀಳುತ್ತವೆ. ಸಿದ್ಧೇಶ್ವರನ ಮುಂದಿನ ದೀಪಸ್ತಂಭವು ( ಅಖಂಡ ಕಲ್ಲಿನದು ) ಸುಮಾರು ೩೦ ಫೂಟು ಎತ್ತರವಿವೆ. ಅದರ ಬುಡದಲ್ಲಿ ಸನ್ ೧೫೦೫ನೆಯ ವರುಷದ ಲಿಪಿಯುಂಟು.

**ಬೇವೂರ**:—ಬಾಗಲಕೋಟಿಯು ಪೂರ್ವಕ್ಕೆ ೧೫ ಮೈಲಿನ ಮೇಲೆ ಅದೆ. ಇಲ್ಲಿ ಮೂರು ಹಳೆಯ ಗುಡಿಗಳಿವೆ. ಅವುಗಳಲ್ಲಿ ರಾಮೇಶ್ವರ ಗುಡಿಯಲ್ಲಿ ೧೨ನೆಯ ಶತಕದ ಲಿಪಿಯುದೆ. ಇಲ್ಲಿ ಹತ್ತಿ ಅರೆಯುವ ಜೀನು ಉಂಟು.

**ಕಲಾದಗಿ:**—ಇದು ಬಾಗಲಕೋಟೆಯ ಪಶ್ಚಿಮಕ್ಕೆ ೧೮॥ ಮೈಲಿನ ಮೇಲೆ ಅದೆ. ಪೂರ್ವಕಾಲದಲ್ಲಿ ಪ್ರಸಿದ್ಧವಾದ ಗ್ರಾಮವಿದು. ಇಂಗ್ಲಿಷರ ಆಳಿಕೆಯ ಆರಂಭದಲ್ಲಿ ಸರಕಾರದವರು ಇಲ್ಲಿದ್ದ ರಾವುತ (ಮಿಲಿಟರಿ ಜನ) ರನ್ನು ತೆಗೆದ ಬಳಿಕ ರಾವುತರ ಛಾವಣಿಯು ಹಾಳಾಯಿತು. ಇಸ್ವಿ ಸನ್ ೧೮೬೪ರಿಂದ ಇದು ಜಿಲ್ಹೆಯ ಮುಖ್ಯ ಸ್ಥಳವಾಗಿದ್ದುದರಿಂದ, ಈ ಊರು ಅಭಿವೃದ್ಧಿ ಹೊಂದುತ್ತ ನಡೆದಿತ್ತು. ಆದರೆ ೧೮೮೪ರಲ್ಲಿ ಜಿಲ್ಹೆಯ ಠಾಣೆ ಯನ್ನು ವಿಜಾಪುರಕ್ಕೆ ಒಯ್ದುದ್ದರಿಂದ, ಇದು ಮೊದಲಿನಂತೆ ಹಳ್ಳಿಯ ಸ್ವರೂಪ ಹೊಂದಿತು. ಇಲ್ಲಿ ಪೋಷ್ಟ ಮತ್ತು ತಾರ ಆಫೀಸುಗಳು, ದವಾಖಾನೆ, ಸಾಲೆ, ಜೀನುಗಳಿರುತ್ತವೆ. ವ್ಯಾಪಾರವು ತಕ್ಕಮಟ್ಟಿಗೆ ಆಗುವದು. ದನಗಳ ವ್ಯಾಪಾರವು ದೊಡ್ಡ ಪ್ರಮಾಣದಿಂದ ನೆರೆಯುವದು. ಇಲ್ಲಿ ಉತ್ತಮ ತರಹದ ಪಾಟಿಗಳೂ, ನಾದಿಗರ ಕತ್ತಿ ಮಸೆಯುವ ಕಲ್ಲು ಗಳೂ, ಕಂಬಳಿಗಳೂ ತಯಾರಾಗುತ್ತವೆ.

**ಮುಂಕಣಿ:**—ಬಾಗಲಕೋಟೆಯ ಈಶಾನ್ಯಕ್ಕೆ ೨೦ ಮೈಲಿನ ಮೇಲೆ ಅದೆ. ಕೃಷ್ಣಾ ನದಿಯ ದಂಡೆಯಲ್ಲಿದ್ದ ಈಶ್ವರನ ಗುಡಿಯಲ್ಲೊಂದು ದೇವಗಿರಿಯ ಯಾದವರು ಬರೆಯಿಸಿದ ಕನ್ನಡ ಲಿಪಿಯುಂಟು. ಕೃಷ್ಣೆಯ ದಂಡೆಯಲ್ಲೊಂದು ವಿಷದ ಕುಂಡವಿರುತ್ತದೆ. ಅದರ ನೀರೊಳಗೆ ವಿಷ ವಿರುತ್ತದೆಂದು ತಿಳಿದು ಊರವರು ಅದರ ಸುತ್ತಲೂ ಬೇಲಿಯನ್ನು ಹಚ್ಚಿರುತ್ತಾರೆ.

**ಶಿರೂರ:**— ಇದು ಬಾಗಲಕೋಟೆಯ ಆಗ್ನೇಯಕ್ಕೆ ೯ ಮೈಲಿನ ಮೇಲೆ ಅದೆ. ಇಲ್ಲಿ ರಾಮಲಿಂಗ, ಲಕ್ಷ್ಮೀನಾರಾಯಣ, ಗಣಪತಿ, ಸಿದ್ಧೇಶ್ವರ, ಬಸವೇಶ್ವರ ದೇವಾಲಯಗಳು ಉಂಟು. ಸಿದ್ಧೇಶ್ವರ ದೇವಾಲಯದಲ್ಲಿ ೧೦-೧೧ನೆಯ ಶತಮಾನಗಳಲ್ಲಿಯ ಲಿಪಿಗಳು ಕೊಲ್ಹಾಪುರ ಮಾಂಡಲಿಕರ (ಶಿಲಾಹಾರರ) ಕಾಲದವು ಇರುತ್ತವೆ. ಈ ಊರ ಗುಡ್ಡದ ಮೇಲೆ ಒಂದು ಹನುಮಂತನ ಮೂರ್ತಿ ಉಂಟು. ಇಲ್ಲಿ ಜೈನರ ಕಾಲದ ಕಂಬಗಳು ಬಹಳ ಇರುತ್ತವೆ. ಇಲ್ಲಿಯ ಕೆರೆಯು ಬಹು ಚಂದವಾಗಿದೆ. ಈ ಊರಿಗೆ ನೀರಿನ ಅರಬು ಬಹಳ.

**ಗಲಗಲಿ:**—ಬಾಗಲಕೋಟೆಯ ವಾಯುವ್ಯಕ್ಕೆ ೩೨ ಮೈಲಿನ ಮೇಲೆ ಕೃಷ್ಣೆಯ ದಂಡೆಯಲ್ಲಿದೆ. ಇದಕ್ಕೆ ಗಾಲವಕ್ಷೇತ್ರವೆನ್ನುವರು. ಊರ ಹತ್ತರ ಕೃಷ್ಣೆಯ ದಂಡೆಯಲ್ಲಿ ಸ್ವಲ್ಪ ಎತ್ತರವಾದ ಬಂಡೆಯಲ್ಲಿ ಸುಮಾರು ೫ ಫೂಟು ಎತ್ತರವುಳ್ಳ ಕಮಾನಿನಂಥ ಏಳು ಗುಡಿಗಳಿರುತ್ತವೆ. ಅವು ಗಾಲವ ಮುಂತಾದ ಏಳು ಋಷಿಗಳ ಸ್ಥಾನಗಳೆಂದು ಹೇಳುವರು. ಕೃಷ್ಣೆಯ ಪ್ರವಾಹ ದೊಳಗಿನ ದೊಡ್ಡದೊಂದು ಬಂಡೆಗೆ ಋಷಿಗಳ ಬಂಡೆಯೆಂದೆನ್ನುತ್ತಾರೆ. ಒಂದೂವರಿ ಮೈಲಿನ ಮೇಲೆ ಹೊಳೆಯ ಪ್ರವಾಹದ ಕೆಳಗೆ ದೊಡ್ಡದೊಂದು ಗುಡಿಯಿತ್ತೆಂದು ಹೇಳುತ್ತಾರೆ.

**ಹಳ್ಳೂರ:**—ಬಾಗಲಕೋಟೆಯ ಪೂರ್ವಕ್ಕೆ ೧೨ ಮೈಲಿನ ಮೇಲೆ ಅದೆ. ಇಲ್ಲಿಯ ಬಸವೇಶ್ವರನ ಗುಡಿಯನ್ನು ಚೋಳ ಅರಸನು(ಚಾಲುಕ್ಯರ ಕ್ಕಿಂತ ಮೊದಲು ಆಳಿದವರು) ಕಟ್ಟಿಸಿದ್ದಾನೆಂದು ಹೇಳುತ್ತಾರೆ. ಇಲ್ಲಿಯ ಬಸವೇಶ್ವರನು ದೊಡ್ಡವನಿರುತ್ತಾನೆ. ಈ ಗುಡಿಯಲ್ಲಿ ಒಂದು ಹೊಂಡವೂ ಒಂದು ಭಾವಿಯೂ ಇರುವವು. ಊರ ಹೊರಗೆ ಉತ್ತರಕ್ಕೆ ಮರಡಿ ಮೇಲೆ ಮೇಲ್ಗುಡಿಯೆಂಬ ಈಶ್ವರನ ಗುಡಿಯುಂಟು. ಈ ಗುಡಿಯಲ್ಲಿ ಜೈನ ತೀರ್ಥಂಕರರ ಮೂರ್ತಿಗಳಿವೆ. ಕೆಲವು ಒಡೆದಿರುತ್ತವೆ. ಮಾರ್ಗಶಿರ ಮಾಸ ದಲ್ಲಿ ಈ ಬಸವೇಶ್ವರನ ಜಾತ್ರೆಯಾಗುತ್ತದೆ. ಊರಲ್ಲಿ ಎರಡು ಸವೆದ ಲಿಪಿಗಳಿವೆ. ಇಲ್ಲಿ ಹತ್ತಿ ಅರೆಯುವ ಜೀನುಗಳುಂಟು.

**ಗದ್ದನಕೇರಿ:**—ಬಾಗಲಕೋಟೆಯ ಪಶ್ಚಿಮಕ್ಕೆ ೫ ಮೈಲಿನ ಮೇಲೆ ಅದೆ. ಇಲ್ಲಿ ಊರ ಹತ್ತರವಿದ್ದ ಗುಡ್ಡದಲ್ಲಿ ಯವನರ ಪದ್ಧತಿಯ ಎರಡು ಗೋರಿಗಳೂ, ಗುಡಿಗಳೂ ಉಂಟು. ಒಂದು ಗೋರಿಯು ಬಾಗೇವಾಡಿ ತಾಲೂಕಿನಲ್ಲಿ ಉಕ್ಕಲಿಯಃ ಮಳಿಯಪ್ಪಯ್ಯನೆಂಬ ಪಂಚಾಳ (ಪತ್ತಾರ) ಜಾತಿಯ ಸತ್ಪುರುಷನದು, ಇನ್ನೊಂದು ಗೋರಿಯು ಅವನ ಮಗನಾದ ಮಾನಪ್ಪಯ್ಯನದು. ಈ ಗೋರಿಗಳ ಮೇಲೆ ಗುಡಿಯನ್ನು ಕಟ್ಟಿಸಿದ್ದಾರೆ. ಮಳೆಗಳು ತಪ್ಪಿದರೆ ರೈತರು ಮಳಿಯಪ್ಪಯ್ಯನನ್ನು ಪೂಜಿಸಿ ಅನ್ನಸಂತ ರ್ಪಣೆ ಮಾಡಿ, ಬೇಡಿಕೊಳ್ಳುವರು.

**ಕುಂದರಗಿ:**– ಇದು ಬಾಗಲಕೋಟೆಯಿಂದ ಪೂರ್ವಕ್ಕೆ ೧೪ ಮೈಲಿನ ಮೇಲೆ ಅದೆ. ಇಲ್ಲಿ ೧೨ನೆಯ ಶತಕದಲ್ಲಿ ಕಟ್ಟಿಸಿದ ಈಶ್ವರನ ಮತ್ತು ಹನುಮಂತನ ಗುಡಿಗಳು ಇರುತ್ತವೆ. ಇಲ್ಲಿ ಉತ್ತಮ ತರದ ಜಿನಗು ಕಂಬಳಿಗಳು ತಯಾರಾಗುತ್ತವೆ.

ಪ್ರಶ್ನೆಗಳು:—ಈ ತಾಲೂಕಿನ ಮೇರೆ ಹೇಳಿರಿ? ಭೂಮಿ, ಹವೆ, ಮಳೆಗಳ ವಿಷಯಕ್ಕೆ ಗೊತ್ತಿದ್ದುದನ್ನು ಹೇಳಿರಿ? ಕೃಷ್ಣಾ, ಘಟಪ್ರಭಾಗಳ ಸಂಗಮವೆಲ್ಲಿ? ಕೆರೆಗಳಿದ್ದ ಊರುಗಳಾವವು? ಶಾಲೆಗಳಿದ್ದ ಊರುಗಳಾವವು? ಬಾಗಲಕೋಟೆಯಿಂದ ಬೆಳಗಾಂವಿಯ ಕಡೆಗೆ ಹೋಗುವ ರೈಲುಮಾರ್ಗದಲ್ಲಿ ಹತ್ತುವ ಸ್ಟೇಶನ್ನುಗಳಿದ್ದ ಊರುಗಳಾವವು? ಸೊಲ್ಲಾಪುರದಿಂದ ಹುಬ್ಬಳ್ಳಿಗೆ ಹೋಗುವ ಲೈನಮಾರ್ಗದಲ್ಲಿ ಹತ್ತುವ ಊರುಗಳಾವವು? ಬಾಗಲಕೋಟೆಯ ವಿಷಯಕ್ಕೇನು ಗೊತ್ತಿದೆ? ಅಲ್ಲಿ ವ್ಯಾಪಾರ ಬೆಳೆಯಲು ಕಾರಣವೇನು? ಕಲಾದಗಿಯಲ್ಲಿ ಹುಟ್ಟುವ ಸಾಮಾನುಗಳಾವವು? ಶಿರೂರ ಹಳ್ಳೂರುಗಳ ಮಾಹಿತಿ ಹೇಳಿರಿ?

---

## ಬದಾಮಿ ತಾಲೂಕು

**ಮೇರೆಗಳು:**—ಉತ್ತರಕ್ಕೆ ಬಾಗಲಕೋಟ ತಾಲೂಕು; ಪಶ್ಚಿಮಕ್ಕೆ ರಾಮದುರ್ಗ, ತೊರಗಲ್ಲ ಜಹಾಗೀರುಗಳು; ದಕ್ಷಿಣಕ್ಕೆ ಧಾರವಾಡ ಜಿಲ್ಹೆ, ರಾಮದುರ್ಗ ಸಂಸ್ಥಾನಗಳು; ಪೂರ್ವಕ್ಕೆ ಹುನಗುಂದ ತಾಲೂಕು ಉಂಟು.

**ಸ್ಥಾನ:**—ಇದು ಜಿಲ್ಹೆಯ ಆಗ್ನೇಯಕ್ಕೆ ಬಾಗಲಕೋಟ ತಾಲೂಕಿನ ದಕ್ಷಿಣ ಭಾಗದಲ್ಲಿದೆ. ಇದರಲ್ಲಿ ೧೭೨ ಸರಕಾರಿ ಹಳ್ಳಿಗಳೂ, ೬೩ ದುಮಾಲಿ ಹಳ್ಳಿಗಳೂ ಇರುತ್ತವೆ. ಕ್ಷೇತ್ರವು ೭೭೬ ಚೌರಸ ಮೈಲು, ಜನಸಂಖ್ಯೆ ೧,೩೦,೭೬೫, ತೆರಿಗೆ ೧,೧೦,೨೮೨ ರೂಪಾಯಿಗಳುಂಟು.

**ಭೂಮಿಯ ಸ್ವರೂಪ:**—ಈ ತಾಲೂಕಿನಲ್ಲಿ ಗುಡ್ಡಗಳು ಬಹಳ ಇದ್ದುದರಿಂದ ಮಳೆಯು ಹೆಚ್ಚಾಗುವದು. ಅದರಿಂದ ಇದಕ್ಕೆ ವಿಜಾಪುರ ಜಿಲ್ಹೆಯ ಮಲೆನಾಡು ಅನ್ನಬಹುದು. ಬದಾಮಿಯ ಗುಡ್ಡಗಳನ್ನು ಹತ್ತಿ ನೋಡಲು, ಸಮೀಪದ ಕೊಳ್ಳ-ಕಂದರಗಳೂ, ಹೊಲ-ಗದ್ದೆಗಳೂ ಬಹಳ ಚಂದ ಕಾಣುತ್ತವೆ. ಇಲ್ಲಿಯ ಭೂಮಿ ಉಸುಕಿನದು, ಎರೆಭೂಮಿ ಕಡಿಮೆ.

**ಹವೆ, ಮಳೆ, ನೀರು :—** ಈ ತಾಲೂಕಿನಲ್ಲಿ ಗುಡ್ಡಗಳೂ ಉಸುಕಿನ ಭೂಮಿಯೂ ಹೆಚ್ಚು ಇರುವದರಿಂದ ಇಲ್ಲಿಯ ಹವೆಯು ಅತ್ಯುಷ್ಣವಾದುದೂ ರೋಗಕರವಾದುದೂ ಉಂಟು. ಮಳೆಗಾಲ, ಚಳಿಗಾಲಗಳಲ್ಲಿ ಮಲೇರಿಯಾ ಉಪದ್ರವವು ಬಹಳ. ಮಳೆಯು ೧೮ರಿಂದ ೪೭ ಇಂಚಿನ ವರೆಗೆ ಅಂದರೆ ಸರಾಸರಿ ೨೪ ಇಂಚು ಬೀಳುವದು. ಇಲ್ಲಿ ಹಳ್ಳಗಳೂ ಕೆರೆಗಳೂ ಕಡಿಮೆ. ಅಲ್ಲಲ್ಲಿ ಅಲ್ಪಸ್ವಲ್ಪವಿದ್ದರೂ ಕೂಡ ಅವು ಬೇಗ ಬತ್ತುವವು.

**ಬೆಳೆ ಮತ್ತು ಉದ್ಯೋಗ :—** ಮುಂಗಾರಿ ಪೀಕು, ಸೇಂಗಾ, ಹತ್ತಿ, ಬಿಳಿಜೋಳ ಇವು ಈ ತಾಲೂಕಿನ ಮುಖ್ಯ ಬೆಳೆಗಳು. ಚೊಳಚಗುಡ್ಡದ ವೀಳ್ಯದ ಎಲೆಗಳೂ, ಬೆಳವಲಕೊಪ್ಪದ ಸಾಣೆಕಲ್ಲುಗಳೂ, ಬದಾಮಿ, ಗುಳೇದಗುಡ್ಡಗಳ ಇಮಾರತಿಯು, ಹೌದಿನ, ಪರಸಿ ಕಲ್ಲುಗಳೂ ಪ್ರಸಿದ್ಧ. ಜಾಲಿಹಾಳ, ಕೆರೂರ, ಬೇಲೂರ, ಮುದಕವಿ, ಬಟಕುರಕಿ, ಕಟಗೇರಿಗಳಲ್ಲಿ ನೇಕಾರಿಕೆ ಹೆಚ್ಚು. ಕೆಲವರು ತೋಟದ ಉದ್ಯೋಗ ಮಾಡುವರು. ಜೇಸು ಬಿಡಿಸುವ, ಅಂಟು ಬಿಡಿಸುವ ಉದ್ಯೋಗವೇ ಕೆಲವರದಾಗಿರುವದು. ಒಡ್ಡರು ಕಣಿಗಳಲ್ಲಿ ದುಡಿಯುವರು. ಒಟ್ಟಿನ ಮೇಲೆ ಈ ತಾಲೂಕಿನಲ್ಲಿ ಉದ್ಯೋಗಸ್ಥರು ಹೆಚ್ಚು. ಇದು ಗುಡ್ಡುಗಾಡು ಪ್ರದೇಶವಿದ್ದುದರಿಂದ ಇಲ್ಲಿಯ ಜನರು ಹೆಚ್ಚು ಗಟ್ಟಿಗರೂ, ಸುಖಿಗಳೂ ಇರುವರು.

**ದೊಡ್ಡ ಊರುಗಳೂ, ಸಾಲೆಗಳಿದ್ದ ಊರುಗಳೂ :—** ಬದಾಮಿ, ಕೆರೂರ, ಗುಳೇದಗುಡ್ಡ, ಬಟಕುರಕಿ, ಮುದಕವಿ, ಬೇಲೂರ, ಜಾಲಿಹಾಳ, ಚೊಳಚಗುಡ್ಡ, ನಂದಿಕೇಶ್ವರ, ನೀಲಗುಂದ, ಕಟಗೇರಿ, ಕೆರಕಲಮಟ್ಟಿ, ಅನವಾಲ, ಪಟ್ಟದಕಲ್ಲು, ಲಾಯದಗುಂದಿ, ಕುಟಕನಕೇರಿ, ಎಂಡಿಗೇರಿ, ಎಂಕಂಚಿ, ಮಣಿನಾಗರ, ಹೇಲೂರ, ಹೆಬ್ಬಳ್ಳಿ, ಗೋವನಕೊಪ್ಪ ಇದಲ್ಲದೆ ಶಿವಯೋಗಮಂದಿರದಲ್ಲಿ ಶಿವಯೋಗಮಂದಿರದಲ್ಲಿ ಸಂಸ್ಕೃತ ಪಾಠಶಾಲೆ ಉಂಟು.

**ಸಂತೆಯಾಗುವ ಊರುಗಳು :—** ಬದಾಮಿ, ಗುಳೇದಗುಡ್ಡ, ಕೆರೂರ, ನೀಲಗುಂದ, ಮುದಕವಿ, ಗೋವನಕೊಪ್ಪ, ಹೆಬ್ಬಳ್ಳಿ, ಬೇಲೂರ, ಕಟಗೇರಿ.

**ಜಾತ್ರೆಯಾಗುವ ಊರುಗಳು**:— ಚೊಳಚಗುಡ್ಡದ ಹತ್ತರ **ಶ್ರೀಬನಶಂಕರೀ ದೇವಿಯ ಜಾತ್ರೆಯು** ಪುಷ್ಯ ಶುದ್ಧ ೧೫ಕ್ಕೆ (ಬನದ ಹುಣ್ಣಿವೆಗೆ) ಆಗುತ್ತದೆ. ಪಟ್ಟದಕಲ್ಲದಲ್ಲಿ **ಬಸವಣ್ಣನ ಜಾತ್ರೆ**. ಕೆಲವಡಿಯಲ್ಲಿ **ರಂಗನಾಥನ ಜಾತ್ರೆ**. ಶಿವಯೋಗಮಂದಿರದಲ್ಲಿ **ಶಿವಯೋಗಿಗಳ ಜಾತ್ರೆಯು** ಶಿವರಾತ್ರಿಗೆ ಆಗುತ್ತದೆ. ಕೆರೂರಲ್ಲಿ **ರಾಚೋಟೇಶ್ವರ ಜಾತ್ರೆ**. ನಂದಿಕೇಶ್ವರದಲ್ಲಿ **ಮಹಾಕೂಟೇಶ್ವರನ ರಥೋತ್ಸವವಾಗುತ್ತದೆ**.

**ಪೋಷ್ಟ ಇದ್ದ ಊರುಗಳು**:—ಬದಾಮಿ, ಗುಳೇದಗುಡ್ಡ, ಶಿವಯೋಗಮಂದಿರ, ಚೊಳಚಗುಡ್ಡ, ಕೆರೂರ, ಗೋವನಕೊಪ್ಪ, ಬೇಲೂರ, ಮುದಕವಿ, ನೀಲಗುಂದ.

**ತಾರ ಆಫೀಸ ಇದ್ದ ಊರುಗಳು**:—ಬದಾಮಿ, ಗುಳೇದಗುಡ್ಡ, ಕೆರೂರ.

**ಪೋಲೀಸ ಗ್ಯಾಟ ಇದ್ದ ಊರುಗಳು**:—ಬದಾಮಿಯಲ್ಲಿ ಠಾಣಾ ಪೋಸ್ತು, ಬಟಕುರಕಿ, ಮುದಕವಿ, ಗೋವನಕೊಪ್ಪ, ಬೇಲೂರ, ಕೆರೂರ, ಗುಳೇದಗುಡ್ಡ.

**ಸ್ಟೇಶನ್ ಇದ್ದ ಊರುಗಳು**:—ಬದಾಮಿ, ಕಟಗೇರಿ.

## ಹೊಳೆ-ಹಳ್ಳಗಳು

**ಮಲಾಪಹಾರಿ**:—ಇದು ಈ ತಾಲೂಕಿನಲ್ಲಿ ದಕ್ಷಿಣ, ಪೂರ್ವಭಾಗಗಳಲ್ಲಿ ಹರಿದು, ಹುನಗುಂದ ತಾಲೂಕಿನೊಳಗೆ ಸೇರಿ, ಸಂಗಮದ ಹತ್ತರ ಕೃಷ್ಣೆಗೆ ಕೂಡುತ್ತದೆ. ಇದರ ದಂಡೆಯಲ್ಲಿ ಹಾಗನೂರ, ಗೋವನಕೊಪ್ಪ, ಠಾಟಲಿ, ಹೆಬ್ಬಳ್ಳಿ, ಖೇಡ, ಮಂಗಳೂರ, ಪಟ್ಟದಕಲ್ಲು, ನಂದಿಕೇಶ್ವರ, ಲಾಯದಗುಂದಿ, ಹೇಲೂರ, ಶಿವಯೋಗಮಂದಿರಗಳುಂಟು.

**ಸರಸ್ವತಿ ಹಳ್ಳ**:—ಬನಶಂಕರೀ ದೇವಸ್ಥಾನದ ಹತ್ತರಿದ್ದ ತಪ್ಪಲದಲ್ಲಿ ಹುಟ್ಟಿ, ಮುಂದೆ ಮಲಪ್ರಭಾ ನದಿಗೆ ಕೂಡುತ್ತದೆ. ಈ ಹಳ್ಳದಿಂದ ಕಾಲುವೆಗಳನ್ನು ತೆಗೆದುಕೊಂಡು, ಅನೇಕ ತೋಟಗಳನ್ನು ಮಾಡಿಕೊಂಡಿರುವರು. ಇದರಲ್ಲಿ ನೀರು ಯಾವಾಗಲೂ ಹರಿಯುತ್ತವೆ.

**ಕೆರೆಗಳಿದ್ದ ಊರುಗಳು**:—ಕಟಗೇರಿ, ಕೆಂದೂರು, ನೀಲಗುಂದ, ಪರ್ವತಿ, ಮುದಕವಿ, ಕೆರೂರ.

## ಲೈನವಾರ್ಗಗಳು

**ಬದಾಮಿಯಿಂದ ಕಲಾದಗಿ ವಾರ್ಗ:—**ಕಟಗೇರಿ, ಕೆರಕಲಮಟ್ಟಿ ಗಳ ಮೇಲಿಂದ ಹೋಗಿದೆ.

**ಬದಾಮಿಯಿಂದ ಶಿರೂರ ವಾರ್ಗ:—**ಕುಟಕನಕೇರಿ, ಗುಳೇದ ಗುಡ್ಡಗಳ ಮೇಲಿಂದ ಹೋಗಿದೆ.

**ಬದಾಮಿಯಿಂದ ರೋಣ ವಾರ್ಗ:—**ಚೊಳಚಗುಡ್ಡ, ಬೇಲೂರ, ಜಾಲಿಹಾಳಗಳ ಮೇಲಿಂದ ಹೋಗಿದೆ.

**ಬದಾಮಿಯಿಂದ ಹುಬ್ಬಳ್ಳಿ ವಾರ್ಗ:—**ಮುತ್ತಲಗೇರಿ, ಬೆಳವಲ· ಕೊಪ್ಪ, ಗೋವನಕೊಪ್ಪಗಳ ಮೇಲಿಂದ ಹೋಗಿದೆ.

## ಊರುಗಳ ವಿಶೇಷ ವರ್ಣನೆ

ಬದಾಮಿ :—ವಿಜಾಪುರದ ದಕ್ಷಿಣಕ್ಕೆ ೭೫ ಮೈಲಿನ ಮೇಲೆ ಅದೆ ಇದು ತಾಲೂಕಿನ ಮುಖ್ಯ ಸ್ಥಳ. ಇಲ್ಲಿ ಮಾಮಲೇದಾರರ ಕಚೇರಿಯಿದೆ.



**ಬದಾಮಿಯ ಮೇಣಬಸ್ತಿಗಳು**

ಈ ಊರು ಎರಡು ಗುಡ್ಡಗಳ ನಡುವಿನ ಕಂದರದಲ್ಲಿರುತ್ತದೆ. ಒಂದು ಗುಡ್ಡದ ಬುಡದಿಂದ ಮತ್ತೊಂದರ ವರೆಗೆ ಒಡ್ಡು ಹಾಕಿ ದೊಡ್ಡದೊಂದು ಕೆರೆಯನ್ನು ಮಾಡಿಕೊಂಡಿದ್ದಾರೆ. ಗುಡ್ಡಗಳ ಮೇಲೆ ಎರಡು ಕೋಟೆಗಳು ಇರುವವಲ್ಲದೆ ಬಂಡೆಗಲ್ಲುಗಳಲ್ಲಿ ಕೊರೆದ ನಾಲ್ಕು ಗವಿಗಳಿವೆ. ಅವುಗಳಿಗೆ **ಮೇಣಬಸ್ತಿ**ಗಳೆನ್ನುವರು. ಇವು ಬಹು ಭವ್ಯವಾಗಿರುವವು.

ಈ ನಾಲ್ಕು ಮೇಣಬಸ್ತಿಗಳಲ್ಲಿ ಒಂದು ಶೈವರದು, ಎರಡು ವೈಷ್ಣವರವು, ಒಂದು ಜೈನರದು. ಈ ಗುಹಾಸ್ಥಾನಗಳು ಎಷ್ಟುಮಾತ್ರವೂ ಕೆಟ್ಟಿಲ್ಲ. ಅವುಗಳಲ್ಲಿ ಅತ್ಯುತ್ತಮವಾದ ಚಿತ್ರಗಳೂ, ಶಿಲಾಲಿಪಿಗಳೂ ಇರುತ್ತವೆ. ಇದು ಮೊದಲು ಚಾಲುಕ್ಯರ ರಾಜಧಾನಿಯಾಗಿತ್ತು. ಆಗ ಈ ಊರಿಗೆ "ವಾತಾಪಿಪುರ" ಎಂದು ಅನ್ನುತ್ತಿದ್ದರು. ಇತಿಹಾಸ ದೃಷ್ಟಿಯಿಂದ ಇದು ವಿಜಾಪುರಕ್ಕಿಂತಲೂ ಹೆಚ್ಚು ಪ್ರಸಿದ್ಧವಾದುದು.

**ಗುಳೇದಗುಡ್ಡ** :—ಬದಾಮಿಯ ಈಶಾನ್ಯಕ್ಕೆ ೧೫ ಮೈಲಿನ ಮೇಲೆ ಅದೆ. ಇಲ್ಲಿ ಮೇಲಾದ ಖಣಗಳು ತಯಾರಾಗುವವಲ್ಲದೆ ಇಮಾರತಿಯ ಕಲ್ಲುಗಳೂ, ಬೀಸುವ ಕಲ್ಲುಗಳೂ ದೊರೆಯುತ್ತವೆ. ಈ ಊರಲ್ಲಿ ಜರ್ಮನಿ ಮಿಶನರಿ (ಪಾದ್ರಿ) ಗಳ ವಾಸಸ್ಥಾನವಿದೆ. ಅವರು ಕ್ರೈಸ್ತ ಧರ್ಮವನ್ನು ಹಬ್ಬಿಸಲು ಪ್ರಯತ್ನ ಮಾಡುವರು. ಇಲ್ಲಿಯ ಗುಡ್ಡದ ಮೇಲಿದ್ದ ಕೋಟೆಯನ್ನು ವಿಜಾಪುರದ ಸರದಾರನಾದ ನಿಂಗಪ್ಪನಾಯಿಕ ದೇಸಾಯಿ ಎಂಬವನು ಸನ್ ೧೬೨೭ರಲ್ಲಿ ಕಟ್ಟಿಸಿದನು. ಇಲ್ಲಿ ಮುನಸಿಪಾಲಿಟಿ ಅದೆ. ನೂಲು ರೇಶಿಮೆಯ ವ್ಯಾಪಾರವು ಇಲ್ಲಿ ದೊಡ್ಡ ಪ್ರಮಾಣದಿಂದ ನಡೆಯುವದು.

**ಕೆರೂರ**:—ಬದಾಮಿಯ ವಾಯವ್ಯಕ್ಕೆ ೧೧ ಮೈಲಿನ ಮೇಲೆ ಅದೆ. ಸೊಲ್ಲಾಪುರದಿಂದ ಹುಬ್ಬಳ್ಳಿಗೆ ಹೋಗುವ ಮಾರ್ಗದಲ್ಲಿ ಒಬ್ಬ ಸಮುಗಾರನು ಗುಡಿಸಲು ಹಾಕಿಕೊಂಡು ಇರುತ್ತಿದ್ದನು. ಅವನು ಹಾದಿಕಾರರ ಹರಕು ಕೆರವುಗಳನ್ನು ಹೊಲಿದು ಹೊಟ್ಟೆ ತುಂಬಿಕೊಳ್ಳುತ್ತಿದ್ದನು. ಅಕಸ್ಮಾತ ಒಂದು ದಿನ ಸಲಾಬತಖಾನನೆಂಬ ಪಠಾಣನು ಬೇಟೆಯಾಡುತ್ತ ಹೋಗಿ ಆ ಸಮುಗಾರನ ಮನೆಯಲ್ಲಿ ನೀರು ಕುಡಿದನು. ಇಲ್ಲಿ ಹಾದಿಕಾರರ ತುಳುಕಲು ಇರುತ್ತದೆಂದು ತಿಳಿದು ಅವನು ಆ ಸಮುಗಾರನ ಸಹಾಯದಿಂದ

ಈ ಊರನ್ನು ಕಟ್ಟಿಸಿದನು. ಈ ಕೋಟೆಯ ಕೊತ್ತಳದಲ್ಲಿ ಒಂದು ಕಲ್ಲಿನ ಮೇಲೆ ಆ ಕೆರವುಗಾರನ ಮೂರ್ತಿಯನ್ನು ಕಟೆದು ಇಟ್ಟಿದ್ದಾರೆ. ಅವನಿಂದಲೇ ಈ ಊರು ಸ್ಥಾಪಿತವಾದುದರಿಂದ ಇದಕ್ಕೆ ಕೆರವಿನ ಊರು (ಕೆರೂರ) ಎಂದು ಅನ್ನುವರು. ಊರ ಸುತ್ತಲಿನ ಕೋಟೆಯು ಹಾಳಾಗಿದೆ. ಕೋಟೆಯ ಹೊರಗೆ ಸಂತೆ ನೆರೆಯುವದು. ನಗರೇಶ್ವರ, ರಾಚೋಟೇಶ್ವರ ಗುಡಿಗಳು ಉಂಟು. ರಾಚೋಟೇಶ್ವರನ ರಥೋತ್ಸವವು ರಾಮನವಮಿಗೆ ಆಗುತ್ತದೆ. ಈ ಊರಲ್ಲಿ ಕೆಲವು ಲಿಪಿಗಳುಂಟು. ಈ ಊರು ಬೆಳಗಾಂವಿ ಜಿಲ್ಹೆಗೆ ಸೇರಿದಾಗ ಇಲ್ಲಿ ಮಹಾಲ ಕಚೇರಿ ಇತ್ತು. ಇಲ್ಲಿ ಖಣಗಳ ವ್ಯಾಪಾರವೂ ಮತ್ತು ದನಗಳ ಸಂತೆಯೂ ಆಗುತ್ತವೆ.

**ಮುದಕವಿ:**—ಬದಾಮಿಯ ಈಶಾನ್ಯಕ್ಕೆ ೨೪ ಮೈಲಿನ ಮೇಲೆ ಅದೆ. ಮೊದಲು ಈ ಊರಿನ ಸುತ್ತಲು ಕೋಟೆಯೂ ನಡವೂರಲ್ಲಿ ಭಾಲೆ, ಕಿಲ್ಲೆಗಳೂ ಇದ್ದವಂತೆ. ಈಗ ಹಾಳಾಗಿವೆ. ಪೂರ್ವಕಾಲದಲ್ಲಿ ಇದಕ್ಕೆ ಗಹನದುರ್ಗವೆಂಬ ಹೆಸರಿತ್ತು. ಇಲ್ಲಿ ಉರುಟ ಬಟ್ಟಿಗಳು ತಯಾರಾಗುತ್ತವೆ.

**ನಂದಿಕೇಶ್ವರ:**—ಬದಾಮಿಯ ಪೂರ್ವಕ್ಕೆ ೩ ಮೈಲಿನ ಮೇಲೆ ಅದೆ. ಇದು ಕೆಲವು ಹಳ್ಳಿಗಳು ಕೂಡಿ ಆಗಿರುತ್ತದೆ. ಇಲ್ಲಿ ಮಹಾಕೂಟೇಶ್ವರನ ದೇವಾಲಯವು ಉಂಟು. ಈ ದೇವಾಲಯವು ಬಹು ಪುರಾತನದು. ಅಗಸ್ತ್ಯ ಮೊದಲಾದ ಋಷಿಗಳು ಇಲ್ಲಿ ತಪಸ್ಸು ಮಾಡಿದ ಗುರುತುಗಳಿವೆ. ಈ ಕ್ಷೇತ್ರದಲ್ಲಿ ಎರಡು ಹೊಂಡಗಳೂ, ಅನೇಕ ದೇವಾಲಯಗಳೂ, ಲಿಂಗುಗಳೂ ಉಂಟು. ಈ ಹೊಂಡಗಳ ಕಾಲುವೆಗಳಿಂದ ಅನೇಕ ತೋಟಗಳನ್ನು ಮಾಡಿಕೊಂಡಿದ್ದಾರೆ.

ಮಹಾಕೂಟೇಶ್ವರ ದೇವಾಲಯದ ಸುತ್ತಲೂ ಆವಾರದ ಗೋಡೆಗಳಿರುತ್ತವೆ. ಗುಡಿಯೊಳಗೂ ಹೊರಗೂ ಅಸಂಖ್ಯ ಲಿಂಗುಗಳೂ, ನಾಗರ ಹಾವಿನ ಕಲ್ಲುಗಳೂ ಉಂಟು. ಅವಾರದ ಮಧ್ಯದಲ್ಲಿ ವಿಷ್ಣುಪುಷ್ಕರಣಿ ತೀರ್ಥವೆಂಬುದೊಂದು ಹೊಂಡವಿದ್ದು, ಅದರಲ್ಲಿಯ ನೀರು ಯಾವಾಗಲೂ ಇದ್ದಷ್ಟೇ ಇರುತ್ತದೆ. ಇದನ್ನು ಅಗಸ್ತ್ಯಋಷಿಯು ಕಟ್ಟಿಸಿದನೆಂದು ಹೇಳುತ್ತಾರೆ. ಈ ಹೊಂಡದಿಂದೊಂದು ಕಾಲುವೆ ಹೋಗಿದೆ. ಕೋಣಿಶಂಕರವೆಂಬ ಲಿಂಗವೂ, ಮಹಾಕೂಟೇಶ್ವರ ದೇವಾಲಯವೂ ಈ ಹೊಂಡದ ದಂಡೆಯ

ಮೇಲಿವೆ. ಕೋಣಿಶಂಕರವೆಂಬದಿನ್ನೊಂದು ಈಶ್ವರನ ಗುಡಿಯು ಈ ಹೊಂಡದ ಮೂಲೆಯಲ್ಲುಂಟು. ಈಶ್ವರನ ದರ್ಶನಕ್ಕೆ ಹೋಗುವದಾದರೆ ಆ ಹೊಂಡದ ನೀರಲ್ಲಿ ಮುಳುಗಿ ಹೋಗಬೇಕಾಗುವದು. ಈ ಹೊಂಡದ ಮಧ್ಯದಲ್ಲಿಯೊಂದು ಕಲ್ಲಿನ ಮಂಟಪದೊಳಗೆ ನಾಲ್ಕು ಮುಖವುಳ್ಳ ಬ್ರಹ್ಮ ದೇವರ ಮೂರ್ತಿಯುಂಟೆಂದು ಹೇಳುವರು.

ಕಾಶಿಯ ಅರಸನಾದ ದೇವಿದಾಸನಿಗೆ ಮಂಗನ ಮೋರೆಯದೊಂದು ಮಗಳು ಹುಟ್ಟಿತ್ತು. ಆ ಕೂಸನ್ನು ವಿಷ್ಣುಪುಷ್ಕರಣಿಯಲ್ಲಿ ಸ್ನಾನಮಾಡಿಸ ಬೇಕೆಂದು ದೇವಿದಾಸನಿಗೆ ಸ್ವಪ್ನವಾಯಿತು. ಅವನು ಅದರಂತೆ ಮಾಡಲು ಮಗಳ ಮುಖವು ಸುಂದರ ರೂಪ ಹೊಂದಿತಂತೆ. ಕಾರಣ ದೇವಿದಾಸನು ಈ ಸ್ಥಳದಲ್ಲಿ ಮಹಾಕೂಟೇಶ್ವರ, ಮುದಿಮಲ್ಲಿಕಾರ್ಜುನ, ವಿರೂಪಾಕ್ಷಗಳೆಂಬ ದೇವಸ್ಥಾನಗಳನ್ನು ಕಟ್ಟಿಸಿದನು. ಅವಾರದ ಹೊರಗೆ ಮಹಾದ್ವಾರದ ಎದುರಿನಲ್ಲಿ ' ಪಾಪನಾಶನಿ ' ಅಥವಾ ' ಕಾಶಿ ' ಎಂಬ ಹೊಂಡವನ್ನು ಇವನೇ ಕಟ್ಟಿಸಿದನೆಂದು ಹೇಳುವರು. ಮಹಾಕೂಟೇಶ್ವರನ ಗುಡಿಯ ಕಂಬಗಳಲ್ಲಿ ಆರು ಲಿಪಿಗಳು ಇರುತ್ತವೆ. ಇವು ೭ನೆಯ ಶತಕದಿಂದ ೧೧ನೆಯ ಶತಕದ ಚಾಲುಕ್ಯರ ಆಳಿಕೆಯಲ್ಲಿಯವು. ಈ ಮಹಾಕೂಟೇಶ್ವರನ ರಥೋತ್ಸವವು ಆಗುವದು.

ನಂದಿಕೇಶ್ವರದಿಂದ ಬದಾಮಿಗೆ ಹೋಗುವ ಮಾರ್ಗದ ಮೇಲೊಂದು ತೊಂಡಚಿಂಚಿಯೆಂಬ ಹೊಂಡವಿರುತ್ತದೆ. ಕೋಷ್ಟರಾಯನೆಂಬ ಕುಷ್ಟರೋಗ ಹತ್ತಿದ ಒಬ್ಬ ಮನುಷ್ಯನು ಈ ಹೊಂಡದಲ್ಲಿ ಸ್ನಾನಮಾಡಲು, ಅವನ ರೋಗ ವಾಸಿಯಾಯಿತು. ಕಾರಣ ಅವನು ಆ ಹೊಂಡದ ಹತ್ತರ ಎಷ್ಟೋ ಹೊಂಡಗಳನ್ನು ಕಟ್ಟಿಸಿದ್ದನೆಂದು ಹೇಳುತ್ತಾರೆ. ತೊಂಡಚಿಂಚಿ ಹೊಂಡದ ಪೂರ್ವಕ್ಕೆ ಒಂದು ಗವಿಯಲ್ಲಿ ಆ ಕೋಷ್ಟರಾಯನ ಗುಡಿಯಿದೆ. ಅದರ ಪಶ್ಚಿಮ ಭಾಗದಲ್ಲಿ ಅವನ ಹೆಂಡತಿಯಾದ ಎಲ್ಲಮ್ಮನ ಗುಡಿಯಿದ್ದು, ಅದರ ಎದುರಿನಲ್ಲಿ ಸವೆದದ್ದೊಂದು ಲಿಪಿಯಿದೆ. ಈ ಮಹಾಕೂಟೇಶ್ವರನ ಸುತ್ತು ಮುತ್ತಲಿನ ಗುಡ್ಡದಲ್ಲಿ ಎಲ್ಲ ತರಹದ ಔಷಧದ ತಪ್ಪಲು ಸಿಗುವದು. ಇವೆಲ್ಲ ಸೌಕರ್ಯದ ಮೂಲಕ ಇದು ದಕ್ಷಿಣಕಾಶಿಯೆಂದು ಪ್ರಸಿದ್ಧವದೆ.

**ಶಿವಯೋಗಮಂದಿರ:—** ಇದು ಬದಾಮಿಯಿಂದ ಪೂರ್ವಕ್ಕೆ ೬ ಮೈಲಿನ ಮೇಲೆ ಮಲಪ್ರಭಾ ನದಿಯ ಧಡದಲ್ಲಿದೆ. ಇದು ಯೋಗಾಭ್ಯಾಸಕ್ಕೆ ಪವಿತ್ರ ಸ್ಥಳವೆಂದು ತಿಳಿದು, ಇಲಕಲ್ಲದ **ಶ್ರೀಮನ್ನಿರಂಜನ ಮಹಾಂತ ಸ್ವಾಮಿಗಳೂ**, ಹಾನಗಲ್ಲದ **ಶ್ರೀಮನ್ನಿರಂಜನ ಕುಮಾರಸ್ವಾಮಿಗಳೂ** ಕೂಡಿ ಸನ್ ೧೯೦೮ನೆಯ ಇಸ್ವಿಯಲ್ಲಿ ಶಿವಯೋಗಮಂದಿರವನ್ನು ಸ್ಥಾಪನೆ ಮಾಡಿದರು. ಇಲ್ಲಿ ಯೋಗಸಾಧನೆಗೆ ಬೇಕಾಗುವ ಗವಿಗಳೂ, ಅನುಷ್ಠಾನಕ್ಕೆ ಬೇಕಾಗುವ ಲತಾಮಂಟಪಗಳೂ ಇರುವವಲ್ಲದೆ, ಒಂದು ಗೋ (ಆಕಳ)



ಶಿವಯೋಗಮಂದಿರದ ಲತಾಮಂಟಪ

ಶಾಲೆಯೂ ಉಂಟು. ಪ್ರತಿವರುಷ ಮಾಘ ಬಹುಳ ಶಿವರಾತ್ರಿ ಅಮಾವಾಸ್ಯೆ ದಿವಸ ಜಾತ್ರೆಯಾಗುವದು. ದಿನಾಲು ಶಿವಕೀರ್ತನೆ, ಧಾರ್ಮಿಕ ಸಭೆಗಳು ಜರುಗುವವು. ಇಲ್ಲಿ ಸಂಸ್ಕೃತ, ಧಾರ್ಮಿಕ, ನೈತಿಕ ಸಂಬಂಧವಾದ ಶಿಕ್ಷಣವು ಕೊಡಲ್ಪಡುವದು. ಇದು ಬ್ರಹ್ಮಚರ್ಯ ವಟುಗಳ ಆಶ್ರಮವು. ಇಲ್ಲಿ ಪೋಷ್ಟ ಆಫೀಸು ಉಂಟು.

**ಚೊಳಚಗುಡ್ಡ** :—ಬದಾಮಿಯಿಂದ ದಕ್ಷಿಣಕ್ಕೆ ೩ ಮೈಲಿನ ಮೇಲೆ ಅದೆ. ಇಲ್ಲಿ **ಶ್ರೀಬನಶಂಕರೀ ದೇವಾಲಯ**ವು ಪ್ರಸಿದ್ಧ ಉಂಟು. ಈ ದೇವಿಗೆ **ಶಾಕಂಬರಿ**ಯೆಂತಲೂ ಅನ್ನುವರು. ಬನಶಂಕರಿಯ ಹಳೆಯ ಗುಡಿಯು ಹಾಳಾಗಿದೆ. ಈಗಿದ್ದ ಗುಡಿಯನ್ನು ಸಾತಾರೆಯ ಪರಶುರಾಮ ನಾಯಿಕ ಅಗಳೇ ಎಂಬವನು ಸನ್ ೧೭೫೦ರಲ್ಲಿ ಕಟ್ಟಿಸಿದನೆಂದು ಹೇಳುತ್ತಾರೆ.



**ಶ್ರೀಬನಶಂಕರೀ ದೇವಾಲಯ**

ಹಳೆಯ ಗುಡಿಯು ಚಾಲುಕ್ಯರ ಕಾಲ (೭-೮ನೆಯ ಶತಕ) ದ್ದಿರುತ್ತದೆ. ಅದರ ಸುತ್ತುಮುತ್ತು ಧರ್ಮಶಾಲೆಗಳಿವೆ. ಪೂರ್ವಕಾಲದಲ್ಲಿ ಇಲ್ಲಿ ಎಷ್ಟೋ ವರ್ಷಗಳವರೆಗೆ ಮಳೆಯು ಬೀಳದ್ದರಿಂದ ಭಕ್ತರು ದೇವಿಯ ಮೊರೆಹೊಕ್ಕರು. ದೇವಿಯು ಅವರಿಗೆ ಶಾಕಂಬರಿಯ ರೂಪದಲ್ಲಿ ಪ್ರಸನ್ನಳಾಗಿ, ಗುಡಿಯ ಮುಂದಿರುವ ಹೊಂಡದಲ್ಲಿ ನಿಂತು ಭಕ್ತರಿಗೆ ಆಶೀರ್ವದಿಸಿದಳಲ್ಲದೆ, ತಾನು ನಿಂತ ಹೊಂಡದ ನೀರು ಯಾವಾಗಲೂ ಇದ್ದಷ್ಟೇ ಇರಬೇಕೆಂದು ಸೂಚಿಸಿದಳು.

ಈ ಹೊಂಡದ ಸುತ್ತಳತೆಯು ೩೬೨ ಚೌರಸ ಫೂಟು ಇರುತ್ತದೆ. ಇದರ ನೆಲೆಯು ಎಷ್ಟೆಂಬುದು ತಿಳಿದಿಲ್ಲ. ಅದು ಸುಮಾರು ೨೫ ಫೂಟು

ಇರಬಹುದೆಂದು ಕೆಲವರ ತರ್ಕವಿದೆ. ಇದಕ್ಕೆ ಪೂರ್ವದಲ್ಲಿ ಹರಿಶ್ಚಂದ್ರ ತೀರ್ಥವೆಂದು ಹೆಸರಿತ್ತಂತೆ. ಸನ್ ೧೬೮೦ರಲ್ಲಿ ಶಂಕರಶೆಟ್ಟಿ, ಚಂದ್ರಶೆಟ್ಟಿ ಎಂಬ ಜೈನರು ಈ ಹೊಂಡದ ಸುತ್ತಲೂ ಭದ್ರವಾದ ಗೋಡೆಯನ್ನು ಕಟ್ಟಿಸಿದರೆಂದು ಹೇಳುತ್ತಾರೆ. ಪೂರ್ವದಿಕ್ಕಿನ ಗೋಡೆಯಲ್ಲಿ ನೀರು ಹರಿದು ಹೋಗಲಿಕ್ಕೆ ಮೂರು ಮಾರ್ಗ (ಕಾಲುವೆ) ಗಳನ್ನು ಮಾಡಿದ್ದಾರೆ. ಈ ನೀರಿನಿಂದ ತೋಟಗಳಿಗೆ ಕಾಲುವೆಗಳು ಹೋಗಿವೆ. ಈ ಹೊಂಡಕ್ಕೆ ಸರಸ್ವತಿ ಹಳ್ಳದಿಂದೊಂದು ಕಾಲುವೆಯು ಬಂದು ಕೂಡಿದೆ. ಇದರ ಪಶ್ಚಿಮಕ್ಕೆ ೨೪ ಕಂಬಗಳುಳ್ಳದ್ದೊಂದು ಮಂಟಪವಿದೆ. ಅದರ ಬಳಿಯಲ್ಲಿದ್ದ ಒಂದು ದೀಪದ ಕಂಬಕ್ಕೆ ಮೂರು ಅಂತಸ್ಥಗಳುಂಟು. ಗುಡಿಯಲ್ಲಿಯೂ ಮೂರು ದೀಪದ ಕಂಬಗಳಿವೆ. ಗುಡಿಯ ಪೂರ್ವಕ್ಕೆ ಅರಿಷಿಣಗೊಂಡ, ಎಣ್ಣಿಗೊಂಡಗಳೆಂಬ ಎರಡು ಕೊಂಡ (ಹೊಂಡ) ಗಳುಂಟು. ದಕ್ಷಿಣಕ್ಕೆ ಹರಿಯುವದೊಂದು ಹಳ್ಳಕ್ಕೆ ಒಡ್ಡು ಹಾಕಿ ರಹದಾರಿ ಮಾಡಿದ್ದಾರೆ. ಶ್ರೀಬನಶಂಕರೀ ದೇವಿಯ ಭವ್ಯವಾದ ಸುಂದರ ರಥವು ಪುಷ್ಯ ಶುದ್ಧ ೧೫ಕ್ಕೆ (ಬನದಹುಣ್ಣಿವಿಗೆ) ಎಳೆಯುವದು. ಆ ಕಾಲಕ್ಕೆ ಸುಮಾರು ೮-೧೦ ಸಾವಿರ ಜನರು ನೆರೆಯುವರು.

**ಕಟಗೇರಿ:**—ಬದಾಮಿಯ ವಾಯವ್ಯಕ್ಕೆ ೧೧ ಮೈಲಿನ ಮೇಲೆ ಅದೆ ಪೂರ್ವದಲ್ಲಿ ಈ ಊರ ಸುತ್ತುಮುತ್ತು ಕೆರೆಗಳಿದ್ದವೆಂದು ಹೇಳುತ್ತಾರೆ. ಅವುಗಳಲ್ಲಿ ಎರಡು ಮಾತ್ರ ಉಳಿದಿರುತ್ತವೆ. ಒಂದು ಕೆರೆಯ ಮೇಲೆ ಚಾಲುಕ್ಯರ ಕಾಲದ ಎರಡು ಲಿಪಿಗಳುಂಟು. ಬದಾಮಿಯು ಚಾಲುಕ್ಯ ಅರಸರ ರಾಜಧಾನಿ ಇದ್ದ ಕಾಲಕ್ಕೆ ಇದಕ್ಕೆ ಕಡಿಗೇರಿ ಎಂಬ ಹೆಸರಿತ್ತು. ಇದಕ್ಕೆ ಈಗ ಕಟಗೇರಿ ಅನ್ನುವರು.

**ಕೆಲವಡಿ:**—ಬದಾಮಿಯ ಉತ್ತರಕ್ಕೆ ೧೧ ಮೈಲಿನ ಮೇಲೆ ಅದೆ. ಇಲ್ಲಿಯ ರಂಗನಾಥನ ಗುಡಿಯಲ್ಲಿ ಸಿಂಧುನೆಂಬ ಮಾಂಡಲೀಕ ಅರಸನು ಬರೆಯಿಸಿದ್ದೊಂದು ಲಿಪಿಯುಂಟು. ಈ ಊರಲ್ಲಿ ರಂಗನಾಥನ ಜಾತ್ರೆಯಾಗುತ್ತದೆ.

**ಬೇಲೂರ:**—ಬದಾಮಿಯ ಆಗ್ನೇಯಕ್ಕೆ ೭ ಮೈಲಿನ ಮೇಲೆ ಅದೆ. ಕೋಟೆಯೊಳಗೆ ನಾರಾಯಣನ ಗುಡಿಯಲ್ಲಿಯೂ, ಹನುಮಂತದೇವರ

ಗುಡಿಯಲ್ಲಿಯೂ ೧೦-೧೧ ಶತಕದ ಚಾಲುಕ್ಯರ ಕಾಲದ ಲಿಪಿಗಳಿವೆ. ಇಲ್ಲಿ ಉರುಟ ಬಟ್ಟಿಗಳು ತಯಾರಾಗುತ್ತವೆ.

**ಪಟ್ಟದಕಲ್ಲು:**— ಬದಾಮಿಯ ಈಶಾನ್ಯಕ್ಕೆ ೯ ಮೈಲಿನ ಮೇಲೆ ಅದೆ. ಇದಕ್ಕೆ ಮೊದಲು (ಕಿಸುವೊಳಲು) ಎಂದು ಹೆಸರಿತ್ತು. ಆದರೆ ಬದಾಮಿ ಚಾಲುಕ್ಯ ಅರಸರ ಪಟ್ಟವನ್ನು ಇಲ್ಲಿಯೇ ಕಟ್ಟಿದ್ದರಿಂದ ಇದಕ್ಕೆ ಪಟ್ಟದಕಲ್ಲು ಎಂದು ಹೆಸರು ಬಿದ್ದಿತೆಂದು ಹೇಳುವರು. ಆ ಕಾಲಕ್ಕೆ ಇದು ದೊಡ್ಡ



**ಪಟ್ಟದಕಲ್ಲ ಲೋಕೇಶ್ವರ (ಬಸವೇಶ್ವರ) ದೇವಾಲಯ**

ಕ್ಷೇತ್ರವೆನಿಸಿತ್ತು. ಈಗಲೂ ಆಗಿನ ಕಾಲದ ಗುಡಿಗಳೂ, ಶಿಲಾಲಿಪಿಗಳೂ ಬಹಳ ಉಂಟು. ಸನ್ ೧೫೦ರಲ್ಲಿ ಇಜಿಪ್ತದೇಶದ ತಾಲಿಮೆ ಎಂಬ ಗ್ರಂಥಕರ್ತನು ತಾನು ಬರೆದ ಒಂದು ಗ್ರಂಥದಲ್ಲಿ "ಪೇರ್ತಿಕಲ್" ಎಂಬ ಶಿರಬರಹದ ಕೆಳಗೆ ಈ ಊರ ವರ್ಣನೆ ಮಾಡಿದ್ದಾನೆ. ಇಲ್ಲಿಯ ಪಾಪನಾಥನ ಗುಡಿಯನ್ನು ೫ನೆಯ ಶತಮಾನದಲ್ಲಿ ಇವನೇ ಕಟ್ಟಿದಂತೆ ತೋರುತ್ತದೆ. ಇಂಥ ಹಳೆಯ ಇಮಾರತಿಯು ಕರ್ನಾಟಕದಲ್ಲಿ ಬೇರೆ

ಎಲ್ಲಿಯೂ ಇಲ್ಲ. ಇಲ್ಲಿಯ ಲೋಕೇಶ್ವರ ದೇವಾಲಯದಲ್ಲಿ ಬಸವೇಶ್ವರ ಮೂರ್ತಿಯುಂಟು. ಪ್ರತಿ ವರುಷ ಜಾತ್ರೆಯಾಗುತ್ತದೆ.

**ಅನವಾಲ:**— ಬದಾಮಿಯ ವಾಯವ್ಯಕ್ಕೆ ೧೯ ಮೈಲಿನ ಮೇಲೆ ಅದೆ. ಇಲ್ಲಿಯ ಎರಡು ಅಂತಸ್ತಿನ ಸಣ್ಣ ಗುಡಿಯಲ್ಲಿ ಅನಂತಶಯನನ ಬಹು ಸುಂದರವಾದ ಮೂರ್ತಿ ಇರುತ್ತದೆ.

**ಪ್ರಶ್ನೆಗಳು:**—ಬದಾಮಿ ತಾಲೂಕಿನ ಮೇರೆ ಹೇಳಿರಿ? ಇದು ಜಿಲ್ಹೆಯ ಯಾವ ಭಾಗದಲ್ಲಿದೆ? ಭೂಮಿಯ ಸ್ವರೂಪ ಹೇಳಿರಿ? ಹವೆ ಹ್ಯಾಗೆ? ಬೆಳೆ, ಉದ್ಯೋಗಗಳು ಯಾವವು? ದೊಡ್ಡ ಊರುಗಳಾವವು? ಜಾತ್ರೆಯಾಗುವ ಊರುಗಳಾವವು? ಹೊಳೆ ಹಳ್ಳಗಳಾವವು? ಮಲಪ್ರಭಾ ನದಿಯ ಥಡದಲ್ಲಿದ್ದ ಊರುಗಳಾವವು? ಕೆರೆ ಇದ್ದ ಊರುಗಳಾವವು? ಬದಾಮಿಯ ವಿಷಯಕ್ಕೇನು ಗೊತ್ತಿದೆ? ಗುಳೇದಗುಡ್ಡದಲ್ಲಿ ಮುಖ್ಯ ಉದ್ಯೋಗಗಳಾವವು? ಏನು ಹುಟ್ಟುತ್ತವೆ? ಕೆರೂರ ಅಂತಾ ಹೆಸರು ಬರಲು ಕಾರಣ ವೇನು? ಪಟ್ಟದಕಲ್ಲು, ಶಿವಯೋಗಮಂದಿರ, ಮಹಾಕೂಟಗಳ ವಿಷಯಕ್ಕೆ ಏನು ಗೊತ್ತಿದೆ? ಈ ತಾಲೂಕಿನಲ್ಲಿ ತೋಟಗಳಿಂದ ಏನೇನು ಬೆಳೆದುಕೊಳ್ಳುವರು?

---

## ಹುನಗುಂದ ತಾಲೂಕು

**ಮೇರೆಗಳು:**— ಉತ್ತರಕ್ಕೆ ಕೃಷ್ಣಾ ನದಿಯು, ಅದರಾಚೆಯಲ್ಲಿ ಮುದ್ದೇಬಿಹಾಳ ತಾಲೂಕು; ಪೂರ್ವಕ್ಕೂ ದಕ್ಷಿಣಕ್ಕೂ ಮೊಗಲಾಯಿ ಇಲಾಖೆ; ಪಶ್ಚಿಮಕ್ಕೆ ಬದಾಮಿ ಬಾಗಲಕೋಟ ತಾಲೂಕುಗಳುಂಟು.

**ಸ್ಥಳ:**— ಇದು ಜಿಲ್ಹೆಯ ಆಗ್ನೇಯಕ್ಕೆ ಕೃಷ್ಣಾನದಿಯ ದಕ್ಷಿಣಕ್ಕೆ ಇರುತ್ತದೆ. ಇದರಲ್ಲಿ ಸರಕಾರಿ ಹಳ್ಳಿಗಳು ೧೩೨, ದುಮಾಲಿ ಹಳ್ಳಿಗಳು ೨೫ ಇರುತ್ತವೆ. ಕ್ಷೇತ್ರಫಲ ೫೧೮ ಚೌ. ಮೈಲು. ಜನಸಂಖ್ಯೆ ೧,೧೯,೮೭೯. ತೆರಿಗೆ ೨,೨೫,೯೧೫ ರೂಪಾಯಿ ಉಂಟು.

**ಭೂಮಿಯ ಸ್ವರೂಪ:**—ಪಶ್ಚಿಮ, ದಕ್ಷಿಣ ಭಾಗಗಳಲ್ಲಿ ಮಾತ್ರ ಸ್ವಲ್ಪ ಗುಡ್ಡಗಳಿವೆ. ಉಳಿದದ್ದೆಲ್ಲ ವಾಡಿಕೆಯಾಗಿ ಬೆಳೆಯುಳ್ಳ ಎರೆ ಭೂಮಿಯ ಬೈಲು. ಈ ಜಿಲ್ಹೆಯೊಳಗೆ ಬೆಳೆಯುಳ್ಳ ಭೂಮಿಯಲ್ಲಿ ಈ ತಾಲ್ಲೂಕು ೧ನೆಯ ನಂಬರ ಬಂದಿದೆಯೆಂದು ಹೇಳುತ್ತಾರೆ.

**ಹವೆ, ಮಳೆ, ನೀರು:**— ಇಲ್ಲಿ ಬೇಸಿಗೆಯಲ್ಲಿ ಹವೆಯು ಅತ್ಯುಷ್ಣ; ಉಳಿದ ಕಾಲಗಳಲ್ಲಿ ಅತ್ಯುತ್ತಮವಾದದ್ದು. ನೈಋತ್ಯ ದಿಕ್ಕಿನ ಮಳೆ ಅನಿಯಮಿತ. ಇಲ್ಲಿ ೮ರಿಂದ ೩೧ ಇಂಚಿನ ವರೆಗೆ ಸರಾಸರಿ ೨೩ ಇಂಚು ಮಳೆಯಾಗುತ್ತದೆ. ಉತ್ತರ ಮೇರೆಯಲ್ಲಿ ಕೃಷ್ಣಾ ಮತ್ತು ಮಧ್ಯಭಾಗದಲ್ಲಿ ಮಲಾಪಹಾರಿ ನದಿಗಳಿರುವವಲ್ಲದೆ ಯಾವಾಗಲೂ ಹರಿಯುವ ಹಳ್ಳಗಳು ಉಂಟು. ನೀರಿನ ಸಮೃದ್ಧಿ ಯಾವಾಗಲೂ ಇರುತ್ತದೆ.

## ಹೊಳೆ-ಹಳ್ಳಗಳು

**ಕೃಷ್ಣಾ:**—ಇದು ಈ ತಾಲೂಕಿನ ಉತ್ತರಭಾಗದಲ್ಲಿ ಹರಿದು, ವೊಗಲಾಯಿ ಇಲಾಖೆಯನ್ನು ಸೇರುತ್ತದೆ. ಈ ತಾಲೂಕಿನಲ್ಲಿ ಇದರ ಧಡದಲ್ಲಿ ಕಟಗೂರು, ಸಂಗಮ, ಧನ್ನೂರು, ಮರೋಳ, ಹಾವರಿಗಿ, ಇಸಲಾಂಪುರ




ಕೃಷ್ಣಾ ನದಿಗೆ ಮಲಪ್ರಭಾ-ಘಟಪ್ರಭಾ ನದಿಗಳ ಸಂಗಮವು

ಗಳೆಂಬ ಊರುಗಳುಂಟು. ಈ ನದಿಗೆ ಹಿರೇಹೊಳೆಯೆಂದೂ, ಉತ್ತರ ಹಿಂದುಸ್ತಾನದಲ್ಲಿರುವ ಗಂಗಾ, ಯಮುನಾ ನದಿಗಳ ಸಂಗಮ ಸ್ಥಳದಲ್ಲಿ

ಪ್ರಯಾಗ ಮತ್ತು ಕಾಶಿಗಳೆಂಬ ಪವಿತ್ರ ಕ್ಷೇತ್ರಗಳಿದ್ದಂತೆ, ಹಿಂದುಸ್ತಾನದ ದಕ್ಷಿಣಕ್ಕಿರುವ ಈ ನದಿಗೆ ಘಟಪ್ರಭಾ, ಮಲಪ್ರಭಾ ನದಿಗಳು ಕೂಡುವ ಸ್ಥಳದಲ್ಲಿ ಸಂಗಮ, ಕಪ್ಪಡಿಸಂಗಮಗಳೆಂಬ ಪವಿತ್ರ ಕ್ಷೇತ್ರಗಳಿರುವದರಿಂದ ದಕ್ಷಿಣಗಂಗಾ ಎಂದೂ ಅನ್ನುವರು.

**ಮಲಪ್ರಭಾ:—** ಇದು ಈ ತಾಲೂಕಿನ ಮಧ್ಯಭಾಗದಲ್ಲಿ ಹರಿದು, ಸಂಗಮದ ಹತ್ತರ ಕೃಷ್ಣಾನದಿಗೆ ಕೂಡುತ್ತದೆ. ಇದರ ದಂಡೆಯಲ್ಲಿ ಐಹೊಳ್ಳಿ, ಮುಳ್ಳೂರ, ಕಮತಗಿ, ಮಾಗಿ, ಚಿತ್ತರಗಿ, ಗಂಜಿಹಾಳ, ಬೆಳಗಲ್ಲು, ಹೂವನೂರು, ಇದ್ದಲಗಿ, ಸಂಗಮಗಳೆಂಬ ಊರುಗಳುಂಟು.

**ಉದ್ಯೋಗ:—** ಈ ತಾಲೂಕಿನ ಮುಖ್ಯ ಉದ್ಯೋಗ ಒಕ್ಕಲತನ. ಆದರೂ ಈ ತಾಲೂಕಿನ ದಕ್ಷಿಣ ಭಾಗದಲ್ಲಿರುವ ಗುಡೂರು, ಅಮಿನಗಡ, ಕಮತಗಿ, ಸೂಳಿಭಾಂವಿ, ಬಲಕುಂದಿಗಳಲ್ಲಿ ನೇಕಾರಿಕೆಯು ತಕ್ಕಮಟ್ಟಿಗೆ ನಡೆದಿದೆ. ಗುಡೂರಲ್ಲಿ ಕಾಜಿನ ಬಳೆ, ಎರಕದ ಪಾತ್ರೆಗಳನ್ನು ಮಾಡುವರು. ಕೆಲವು ಕಡೆಗೆ ವ್ಯಾಪಾರ ಉದ್ಯೋಗ ಉಂಟು. ಅಂತು ಈ ತಾಲೂಕು ಸುಖ-ಸಂಪತ್ತುಗಳಿಂದ ತುಂಬಿ ತುಳುಕುತ್ತದೆ. ಈ ತಾಲೂಕಿನಲ್ಲಿ ಎರೆ ಭೂಮಿಯೇ ಹೆಚ್ಚಾಗಿದ್ದುದರಿಂದ ಹಿಂಗಾರಿ ಬೆಳೆಯು ಹೆಚ್ಚಾಗಿ ಬರುವದು. ಅದರಲ್ಲಿ ಬಿಳಿಜೋಳ, ಹತ್ತಿ, ಗೋದಿ, ಕಡಲೆ, ಕುಸುಬಿ, ಅಗಸೆ ಇವೇ ಮುಖ್ಯ ಪೈರುಗಳು. ಈ ಜಿಲ್ಹೆಯಲ್ಲಿ ಈ ತಾಲೂಕಿನಿಂದ ಹತ್ತಿ, ಅರಳೆ, ಎಣ್ಣೆಯ ಕಾಳುಗಳು ಮಾತ್ರ ಹೆಚ್ಚಾಗಿ ಪರಸ್ಥಳಕ್ಕೆ ಹೋಗುತ್ತವೆ. ಈ ತಾಲೂಕಿನಲ್ಲಿ ಹತ್ತಿ ಅರೆಯುವ ಗಿರಣಿಗಳುಂಟು.

**ದೊಡ್ಡ ಊರುಗಳೂ ಶಾಲೆಗಳಿದ್ದ ಊರುಗಳೂ:—** ಹುನಗುಂದ, ಇಲಕಲ್ಲ, ಅಮಿನಗಡ, ಕಮತಗಿ, ಐಹೊಳ್ಳಿ, ಗುಡೂರ, ಕೆಲೂರ, ಕರಡಿ, ಕೋಡಿಹಾಳ, ನಂದವಾಡಗಿ, ಕಂದಗಲ್ಲು, ಓತಗೇರಿ, ಹಿರೇಸಿಂಗನಗುತ್ತಿ, ಗಂಜಿಹಾಳ, ಮಾಗಿ, ಚಿತ್ತರಗಿ, ಇದ್ದಲಗಿ, ಧನ್ನೂರ, ಸಂಗಮ, ಮರೋಳ, ಹಾವರಗಿ, ಅಮರಾವತಿ, ಇಸಲಾಂಪೂರ, ನಾಗೂರ, ರಕ್ಕಸಗಿ, ಗಂಗೂರ, ಬೇವಿನಮಟ್ಟಿ, ಹಿರೇಬಾದವಾಡಗಿ, ಸೂಳಿಭಾಂವಿ, ಚೀಲಾಪೂರ, ಗೊರಬಾಳ.

**ಸಂತೆಯಾಗುವ ಊರುಗಳು:**—ಹುನಗುಂದ, ಇಲಕಲ್ಲ, ಗುಡೂರ, ಅಮೀನಗಡ, ಕಮತಗಿ, ಸಂಗಮ, ಕರಡಿ, ಕೋಡಿಹಾಳ, ಮರೋಳ, ಸೂಳೀಭಾವಿ, ಅಮೀನಗಡ. (ಅಮೀನಗಡದಲ್ಲಿ ದನಗಳ ಸಂತೆಯಾಗುತ್ತದೆ.)

**ಜಾತ್ರೆಯಾಗುವ ಊರುಗಳು**—ಸಂಗಮದಲ್ಲಿ ಶ್ರೀಸಂಗಮೇಶ್ವರ ರಥೋತ್ಸವವು ಚೈತ್ರ ವದ್ಯ ಪಂಚಮಿಗೆ ಆಗುವದು. ಗುಡೂರಲ್ಲಿ ಹುಲ್ಲಪ್ಪ ಚಂದಪ್ಪನ ಜಾತ್ರೆಯು ವೈಶಾಖ ಶುದ್ಧ ಹುಣ್ಣಿವೆ ದಿವಸ ಆಗುವದು. ಕಮತಗಿಯಲ್ಲಿ ಹುಚ್ಚಪ್ಪಯ್ಯ ಸ್ವಾಮಿಗಳ ಜಾತ್ರೆಯಾಗುವದು. ಮಾಗಿಯಲ್ಲಿ ಹುಲಗವ್ವನ ಜಾತ್ರೆ. ಇಲಕಲ್ಲದಲ್ಲಿ ಶ್ರೀಮಹಾಂತಸ್ವಾಮಿಗಳ ಉತ್ಸವವೂ, ಬನಶಂಕರಿಯ ಜಾತ್ರೆಯೂ, ಮುರ್ತುಜಖಾದರಿಯ ಉರುಸೂ ಆಗುತ್ತದೆ. ಗಂಜೀಹಾಳದಲ್ಲಿ ಶ್ರೀಅನ್ನದಾನಿಸ್ವಾಮಿಗಳವರ ಉತ್ಸವವು.

**ಪೋಷ್ಟ ಇದ್ದ ಊರುಗಳು** :—ಹುನಗುಂದ, ಇಲಕಲ್ಲ, ಅಮೀನಗಡ, ಕಮತಗಿ, ಸೂಳಿಭಾವಿ, ಗುಡೂರ, ಕರಡಿ, ಕೋಡಿಹಾಳ, ಮರೋಳ, ಸಂಗಮ, ಧನ್ನೂರ.

**ತಾರ ಆಫೀಸು ಇದ್ದ ಊರುಗಳು:**—ಹುನಗುಂದ, ಇಲಕಲ್ಲ, ಅಮೀನಗಡ.

**ಪೋಲೀಸ ಗ್ಯಾಟ ಇದ್ದ ಊರುಗಳು** :—ಹುನಗುಂದ, ಇಲಕಲ್ಲಗಳಲ್ಲಿ ಠಾಣಾಪೋಸ್ತ. ಅಮೀನಗಡ, ನಂದವಾಡಗಿ, ಕಂದಗಲ್ಲ, ಗುಡೂರಗಳಲ್ಲಿ ಪೋಸ್ತಗಳುಂಟು.

## ಲೈನ ಮಾರ್ಗಗಳು

**ಸೋಲ್ಲಾಪುರದಿಂದ ಬಳ್ಳಾರಿ ಮಾರ್ಗ** :—ಧನ್ನೂರ, ಹುನಗುಂದ, ಇಲಕಲ್ಲಗಳ ಮೇಲಿಂದ ಹೋಗಿದೆ.

**ಹುನಗುಂದದಿಂದ ಬಾಗಲಕೋಟೆ ಮಾರ್ಗ** :— ರಕ್ಕಸಗಿ, ಅಮೀನಗಡ, ಕಮತಗಿಗಳ ಮೇಲಿಂದ ಹೋಗಿದೆ.

**ಹುನಗುಂದದಿಂದ ನಂದವಾಡಗಿ ಮಾರ್ಗ** :—ಹಿರೇಆದಾಪುರ, ತುಂಬಗಳ ಮೇಲಿಂದ ಹೋಗಿದೆ.

**ಬಾಗಲಕೋಟೆಯಿಂದ ಬಳ್ಳಾರಿ ಮಾರ್ಗ:**— ಈ ತಾಲೂಕಿನಲ್ಲಿ ಕಮತಗಿ, ಅಮೀನಗಡ, ಹುನಗುಂದ, ಇಲಕಲ್ಲಗಳ ಮೇಲಿಂದ ಹೋಗಿದೆ.

**ಬಾಗಲಕೋಟೆಯಿಂದ ಸಂಗಮ ಮಾರ್ಗ:**— ಈ ತಾಲೂಕಿನಲ್ಲಿ ಗಂಜಿಹಾಳ, ನಂದನೂರ, ಹೂವನೂರ, ವರಗೋಡದಿನ್ನಿ, ಖಜಿಗಲ್ಲಗಳ ಮೇಲಿಂದ ಹೋಗಿದೆ.

## ಊರುಗಳ ವಿಶೇಷ ವರ್ಣನೆ

**ಹುನಗುಂದ:**—ವಿಜಾಪುರದಿಂದ ಆಗ್ನೇಯಕ್ಕೆ ೮೫ ಮೈಲಿನ ಮೇಲೆ ಅದೆ. ಇದು ತಾಲೂಕಿನ ಮುಖ್ಯ ಗ್ರಾಮವು. ಊರ ಹತ್ತರವಿದ್ದ ಗುಡ್ಡದ ಮೇಲಿರುವ ಮೇಗುಡಿಯೆಂಬ ಜೈನಗುಡಿಯು ಹಾಳಾದದ್ದಿರುತ್ತದೆ. ಈ ಗುಡಿಯಲ್ಲಿದ್ದ ಬಹು ಸುಂದರವಾಗಿ ಚಿತ್ರ ಕೊರೆದ ಕಂಬಗಳನ್ನು ಒಯ್ದು ಭಾವಿಯಲ್ಲಿ ಹಾಕಿದ್ದಾರೆ. ಹಳೆಯ ಕಚೇರಿಯ ಬಳಿಯಲ್ಲಿ ಬಂಡೆಯೊಳಗೆ ಕೊರೆದು ಮಾಡಿದ್ದೊಂದು ಗವಿಯುಂಟು. ಊರೊಳಗೆ ರಾಮಲಿಂಗನ ಗುಡಿಯಲ್ಲಿ ಬಲ್ಲಾಳನ ಮನೆತನದ ಅಯ್ಯನೋರ್ವನು ಬರೆಯಿಸಿದ್ದೊಂದು ಲಿಪಿಯಿದೆ. ಇಲ್ಲಿ ಮಾಮಲೇದಾರರ ಹಾಗು ಫೌಜದಾರರ ಕಚೇರಿಗಳು, ದವಾಖಾನೆ, ಬ್ಯಾಂಕು, ಹತ್ತಿ ಅರೆಯುವ ಗಿರಣಿಗಳುಂಟು.

**ಇಲಕಲ್ಲ:**— ಇದು ಹುನಗುಂದದ ದಕ್ಷಿಣಕ್ಕೆ ೮ ಮೈಲಿನ ಮೇಲಿದೆ. ಇಲ್ಲಿ ಮೊದಲು ಮಹಾಲಕರಿ ಕಚೇರಿ (ಮಹಾಲಕರಿಯು ಮಾಮಲೇದಾರ ಹುದ್ದೇದವನು) ಇತ್ತು. ಈಗ ಇಲ್ಲಿ ಮುನಸಿಪಾಲಿಟಿ ಆಫೀಸ, ದವಾಖಾನೆ ಗಳುಂಟು. ಈ ಊರಲ್ಲಿ ಮೇಲಾದ ಉಡುತರದ ಪಕ್ಕಾಬಣ್ಣದ ಶೀರೆಗಳು ತಯಾರಾಗುತ್ತವೆ. ಇಲ್ಲಿಂದ ರೇಶಿಮೆ ಶೀರೆಗಳು ಮುಂಬಯಿ ವರೆಗೂ ಹೋಗುತ್ತವೆ. ಇಲ್ಲಿ ಅಜಮಾಸು ಎರಡು ಸಾವಿರ ಮಗ್ಗಗಳುಂಟು. ಈ ತಾಲೂಕಿನಲ್ಲಿ ಇದೊಂದೇ ದೊಡ್ಡ ಊರು. ಈ ಊರಲ್ಲಿ ಶ್ರೀಬನಶಂಕರಿ, ಬಸವಣ್ಣ, ವಿಠೋಬಾ ಎಂಬ ಅರ್ವಾಚೀನ ದೇವಸ್ಥಾನಗಳುಂಟು. ಈ ಊರಿಗೆ ಕೆಲವು ದಿನಗಳ ಹಿಂದೆ "ಅನಂತಪುರ"ವೆಂಬ ಹೆಸರಿತ್ತೆಂದು ಹೇಳುವರು. ಈ ಊರ ಸುತ್ತಲೂ ಇಳುವೋರೆಯಾದ, ವಿಸ್ತಾರವಾದ ತೆಗ್ಗು ಪ್ರದೇಶವಿದ್ದುದರಿಂದ ಇದಕ್ಕೆ "ಇಳುಕಲು" ಅಂತಾ ಹೆಸರು ಬಂದಿದೆ. ರೂಢಿ ಯಲ್ಲಿ ಇಲಕಲ್ಲೆಂದು ಕರೆಯುತ್ತಾರೆ. ಈ ಊರಲ್ಲಿ ಮೊಗಲಾಯಿ ಜನರ ವ್ಯಾಪಾರ ಬಹಳ. ಆದ್ದರಿಂದ ಇದು ದೊಡ್ಡ ವ್ಯಾಪಾರದ ಸ್ಥಳವಾಗಿದೆ.

**ಐಹೊಳೆ:**—ಇದು ಹುನಗುಂದದಿಂದ ಪಶ್ಚಿಮಕ್ಕೆ ೧೨ ಮೈಲಿನ ಮೇಲೆ ಮಲಾಪಹಾರಿ ನದಿಯ ಥಡದಲ್ಲುಂಟು. ಇಲ್ಲಿ ಹೊಳೆಯು ವಿಚಿತ್ರವಾಗಿ ಹರಿಯುವದನ್ನು ನೋಡಿ ಜನರು, "ಅಯ್ಯ ಹೊಳೆ" ಎಂದು ಅನ್ನುವದರಿಂದ ಈ ಊರಿಗೆ 'ಅಯ್ಯ ಹೊಳೆ' ಎನ್ನುವ ಪರಿಪಾಠ ಬಿದ್ದಿತು. ಈಗ ರೂಢಿಯಲ್ಲಿ ಐಹೊಳೆ ಅನ್ನುವರು. ಈ ಊರು ಬಹು ಪುರಾತನದು.



**ಐಹೊಳೆಯ ರಾಮಲಿಂಗನ ದೇವಾಲಯ**

ಇಲ್ಲಿಯ ರಾಮಲಿಂಗನ ಗುಡಿಯೂ ಬಹು ಪುರಾತನದು. ಈ ಗುಡಿಯಿಂದ ಊರತನಕ ಕಲ್ಲುಹಾಸಿಗೆಯ ಹಾದಿಯು ಇರುತ್ತದೆ. ಇಲ್ಲಿಯ ನದಿಯ ಥಡದಲ್ಲಿ ಅನೇಕ ಹಾಳುಗುಡಿಗಳುಂಟು. ಊರ ಬಳಿಯಲ್ಲಿದ್ದ ಗುಡ್ಡದ ಮೇಲೊಂದು ಮೇಲುಗುಡಿ ಎಂಬ ಹೆಸರಿನ ದೇವಸ್ಥಾನವಿದೆ. ಅದರಲ್ಲಿ ಚಾಲುಕ್ಯರ ಎರಡನೆಯ ಪುಲಿಕೇಶಿಯ ಆಳಿಕೆಯಲ್ಲಿ ರವಿವರ್ಮನೆಂಬವನು ಶಕೆ ೫೫೬ರಲ್ಲಿ ಮೇಗುಡಿ ಎಂಬ ಜಿನಾಲಯವನ್ನು ಕಟ್ಟಿಸಿದನೆಂದು ಲಿಪಿಯುಂಟು. ಈ ಲಿಪಿಯು ಕರ್ನಾಟಕದಲ್ಲಿಯ ಎಲ್ಲ ಲಿಪಿಗಳಿಗಿಂತಲೂ ಮೊದಲಿದೆಂದು ಹೇಳಬಹುದು. ಬದಾಮಿ ಪ್ರಾಂತಕ್ಕೆ ಮೊದಲು ಮಹಾರಾಷ್ಟ್ರವೆಂಬ ಹೆಸರಿತ್ತೆಂದು ಈ ಲಿಪಿಯಲ್ಲಿ ಬರೆದಿದೆ. ಊರೊಳಗಿನ ಗುಡಿ

ಗಳಲ್ಲಿ ದುರ್ಗವ್ವನ ಗುಡಿಯು ಶ್ರೇಷ್ಠವೆನಿಸಿದೆ. ಇದು ಕರ್ನಾಟಕದೊಳಗೆ ಹಳೇ ಗುಡಿಯೆಂದೂ ಹೇಳಬಹುದು. ಇದರ ಬಾಗಿಲದ ಮೇಲೆ ಚಾಲುಕ್ಯ ವಿಕ್ರಮನ ಹೆಸರು ಬರೆದಿದೆ. ಈ ಅರಸನು ಕ್ರಿ. ಶ. ೬೩೦ರಿಂದ ೬೮೦ ವರೆಗೆ ಆಳಿದನು. ಈ ಗುಡಿಯ ಗೋಡೆಗಳ ಮೇಲೆ ವಿಷ್ಣು, ಗರುಡ ಮುಂತಾದ ದೇವತಾ ಚಿತ್ರಗಳಿವೆ. ಈ ಗುಡಿಯಲ್ಲಿ "ಜಿನೇಂದ್ರನ ಪವಿತ್ರವಾದ ಆಸ್ಥಾನವು" ಎಂದು ಸಂಸ್ಕೃತದಲ್ಲಿ ಬರೆದದ್ದೊಂದು ಲಿಪಿಯು ೭ನೆಯ ಶತಕದ್ದು ಇರುತ್ತದೆ. ಈ ಊರ ಗುಡ್ಡದಲ್ಲಿ ಕಲ್ಲಲ್ಲಿ ಕೊರೆದ ಎರಡು ಗುಡಿ (ಬಸ್ತಿ) ಗಳುಂಟು. ಅವುಗಳಲ್ಲಿ ಒಂದು ಜೈನರದು, ಇನ್ನೊಂದು ಹಿಂದೂ ಜನರದು. ಎರಡೂ ಗುಡಿಗಳಲ್ಲಿ ಎಷ್ಟೋ ಚಿತ್ರವಿಚಿತ್ರವಾದ ಮೂರ್ತಿಗಳುಂಟು. ಬ್ರಹ್ಮದೇವರ ಗುಡಿಯಲ್ಲಿಯೂ ಕೆಲವು ಲಿಪಿಗಳುಂಟು. ಇಲ್ಲಿ ಹುಚ್ಚಮಲ್ಲಿಯ ಗುಡಿ, ನಾರಾಯಣನ ಗುಡಿ, ಕೊಂಟದೇವನ ಗುಡಿಗಳೆಂಬ ಬೇರೆ ಹಲವಾರು ಗುಡಿಗಳುಂಟು. ಆ ಎಲ್ಲ ಗುಡಿಗಳಲ್ಲಿಯೂ ೯ನೆಯ ಶತಕದ ಪೂರ್ವದಲ್ಲಿಯ ಲಿಪಿಗಳಿವೆ. ಊರ ಹೊರಗೆ ಅಸಂಖ್ಯ ಲಿಂಗಗಳಿರುವವು. ಆದ್ದರಿಂದ ಇದು ಪವಿತ್ರವಾದ ಊರೆಂದು ಜನರ ತಿಳಿವಳಿಕೆ. ಮೊದಲು ಈ ಊರ ಜನರು ಹಾಳುಗುಡಿಯಲ್ಲಿಯ ಕಲ್ಲುಗಳಿಂದ ತಮ್ಮ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದರು. ಈಗ ನಮ್ಮ ಸರಕಾರದವರು ಆ ಕಲ್ಲುಗಳನ್ನು ಯಾರೂ ಹಿಡಿಯಕೂಡದೆಂದು ನಿರ್ಬಂಧನೆ ಮಾಡಿದ್ದಾರೆ.

**ಕರಡಿ:**—ಹುನಗುಂದದಿಂದ ಈಶಾನ್ಯಕ್ಕೆ ೧೦ ಮೈಲಿನ ಮೇಲೆ ಅದೆ. ಇಲ್ಲಿ ಮೂರು ಪ್ರಾಚೀನ ಗುಡಿಗಳೂ, ಮೂರು ಲಿಪಿಗಳೂ ಇರುತ್ತವೆ. ಈ ಊರಲ್ಲಿಯದೊಂದು ಗುಡಿಯಲ್ಲಿರುವ ಬಸವೇಶ್ವರನ ಮೂರ್ತಿಯು ಕರಡಿಯ ಹಾಗೆ ಇರುವದರಿಂದ ಈ ಊರಿಗೆ "ಕರಡಿ" ಎಂದು ಹೆಸರು ಬಂದಿದೆಯೆಂದು ಹೇಳುವರು. ಶಿಲಾಲಿಪಿಗಳಲ್ಲಿ ಒಂದು ವಿಜಯನಗರದ ಸದಾಶಿವರಾಯನು ಸನ್ ೧೫೫೩ರಲ್ಲಿ ಬರೆಯಿಸಿದ್ದು ಇರುತ್ತದೆ.

**ನಂದವಾಡಗಿ:**—ಹುನಗುಂದದ ಆಗ್ನೇಯಕ್ಕೆ ೧೫ ಮೈಲಿನ ಮೇಲೆ ಅದೆ. ಈ ಊರಿಗೆ ಕೋಟೆ, ಪೇಟೆ ಎಂಬ ಎರಡು ಭಾಗಗಳಿವೆ. ಇದು ಪೂರ್ವಕಾಲದಲ್ಲಿ ನಂದರಾಜನೆಂಬ ಅರಸನ ರಾಜಧಾನಿಯಾಗಿತ್ತು. ಆದ ಕಾರಣ ಇದಕ್ಕೆ ನಂದರಾಜನ ವಾಸಸ್ಥಾನವೇ "ನಂದವಾಡಗಿ" ಎಂದು

ಕರೆಯಲ್ಪಡುತ್ತದೆ ಈ ಊರ ಕೋಟೆಯಲ್ಲಿ ಒಂದು ಹೊಕ್ಕುತುಂಬುವ ಭಾಂವಿಯ ಮೇಲೆ ಇರುವ ನಾರಾಯಣದೇವರ ಗಡಿಯಲ್ಲಿ ರಾಷ್ಟ್ರಕೂಟರ ಆಳಿಕೆಯಲ್ಲಿ ಬರೆದದ್ದೊಂದು ಲಿಪಿಯುಂಟು. ಸಂಗಮೇಶ್ವರನ ಗುಡಿಯು ದೊಡ್ಡದು ಅದೆ. ಇದರ ಹತ್ತರ ಬಿದ್ದಿರುವ ೯ ಫೂಟು ಉದ್ದವಾದ ವೀರಗಲ್ಲಿನಂಥ ಕಂಬದ ಮೇಲೆ ಕನ್ನಡ ಲಿಪಿಗಳಿವೆ. ಈ ಊರು ಇಂಗ್ರೇಜಿ, ಮೊಗಲಾಯಿ ರಾಜ್ಯಗಳ ಹದ್ದಿಗೆ ಅದೆ.

**ಸಂಗಮ :—** ಹುನಗುಂದದ ಉತ್ತರಕ್ಕೆ ೧೦ ಮೈಲಿನ ಮೇಲೆ ಕೃಷ್ಣಾ ಮಲಾಪಹಾರಿ ನದಿಗಳ ಸಂಗಮದ ಸ್ಥಳದಲ್ಲಿರುತ್ತದೆ. ಇಲ್ಲಿ ಸಂಗಮೇಶ್ವರ ದೇವಸ್ಥಾನವಿದೆ. ಈ ದೇವಸ್ಥಾನವನ್ನು ಸುಮಾರು ೮೦೦ ವರುಷಗಳ ಹಿಂದೆ



ಶ್ರೀಸಂಗಮೇಶ್ವರ ದೇವಾಲಯ (ಸಂಗಮ)

ದ್ಯಾವನಾಯಕನೆಂಬ ಜೈನನು ಕಟ್ಟಿಸಿದನೆಂದು ಹೇಳುತ್ತಾರೆ. ಈ ಗುಡಿಯಲ್ಲಿ ಎರಡು ಲಿಪಿಗಳುಂಟು. ಪೂರ್ವಕಾಲದಲ್ಲಿ ೧೨ನೆಯ ಶತಮಾನದಲ್ಲಿ ಬಿಜ್ಜಳನನ್ನು ಕೊಲ್ಲುವ ಯೋಜನೆಯು ತನ್ನ ಶಿಷ್ಯರಲ್ಲಿಯೇ ನಡೆದುದನ್ನು

ನೋಡಿ, ಶ್ರೀಬಸವೇಶ್ವರನು ಇಂತಹ ಪಾಪಕೃತ್ಯವನ್ನು ಸಹಿಸದೆ ಇಲ್ಲಿಗೆ ಬಂದು ಶ್ರೀಸಂಗಮನಾಥನಲ್ಲಿ ಐಕ್ಯನಾದುದರಿಂದ ಈ ಊರಿಗೆ ಕೂಡಲ ಸಂಗಮ, ಕಪ್ಪಡಿಸಂಗಮವೆಂದು ಹೆಸರು ಬಂದಿದೆ. ಈ ಕ್ಷೇತ್ರದ ಜಾತ್ರೆಯು ಚೈತ್ರ ಶುದ್ಧ ಪಂಚಮಿ ದಿವಸ ರಥೋತ್ಸವವು ಸುರುವಾಗಿ ಮುಂದೆ ಅಮಾವಾಸ್ಯೆಯ ವರೆಗೂ ಬಹು ಚೆಂದವಾಗಿ ಜರುಗುವದು. ಎಲ್ಲ ಜಾತಿಯ ಜನರೂ ಈ ಕ್ಷೇತ್ರಕ್ಕೆ ಬರುವರು. ಈ ದೇವರ ಪೂಜೆಯನ್ನು ವೀರಶೈವರು ತ್ರಿಕಾಲದಲ್ಲಿಯೂ ಮಾಡುವರು.

**ಗುಡೂರ:** - ಹುನಗುಂದದಿಂದ ನೈಋತ್ಯಕ್ಕೆ ೧೩ ಮೈಲಿನ ಮೇಲೆ ಅದೆ. ಇಲ್ಲಿ ಖಣಗಳೂ, ತಾಮ್ರ, ಹಿತ್ತಾಳಿಯ ಪಾತ್ರೆಗಳೂ ಎರಕದ ಸಾಮಾನುಗಳೂ, ಮೂರ್ತಿಗಳೂ, ಕಾಜಿನ ಬಳೆಗಳೂ ತಯಾರಾಗುತ್ತವೆ.

**ಅರಸೀಬೀಡಿ:**—ಹುನಗುಂಡದ ದಕ್ಷಿಣಕ್ಕೆ ೧೬ ಮೈಲಿನ ಮೇಲೆ ಇತ್ತು. ಈಗ ಹಾಳಾಗಿದೆ. ಪೂರ್ವಕಾಲದಲ್ಲಿ ಇದಕ್ಕೆ ವಿಕ್ರಮಪುರವೆಂದು ಅನ್ನುತ್ತಿದ್ದರು. ಈಗ ಚಾಲುಕ್ಯರ ಪ್ರಖ್ಯಾತ ವೀರನಾದ ೬ನೆಯ ವಿಕ್ರಮಾದಿತ್ಯನು ಈ ಊರನ್ನು ಕಟ್ಟಿಸಿದನೆಂದೂ, ಇದನ್ನೇ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂದೂ ಹೇಳುವರು. ಮುಂದೆ ಸ್ವಲ್ಪ ದಿವಸಗಳಲ್ಲಿ ಕಲಚೂರಿ ಬಿಜ್ಜಳನು ಚಾಲುಕ್ಯರ ರಾಜ್ಯವನ್ನು ಆಕ್ರಮಿಸಿದ ಬಳಿಕ ಈ ಊರು ಹಾಳಾಯಿತೆಂದು ಹೇಳುವರು.

**ಪ್ರಶ್ನೆಗಳು:**—ಹುನಗುಂದ ತಾಲೂಕಿನ ಮೇರೆಗಳಾವವು? ಇದು ಜಿಲ್ಹೆಯ ಯಾವ ಭಾಗದಲ್ಲಿದೆ? ಈ ತಾಲೂಕು ಯಾತರ ಸಲುವಾಗಿ ೧ನೆಯ ನಂಬರು ಬಂದಿದೆ? ಸಂಗಮದ ಹತ್ತರ ಕೂಡಿದ ಹೊಳೆಗಳಾವವು? ಕೃಷ್ಣಾನದಿಗೆ ಯಾವ ಹೆಸರು ಗಳಿವೆ? ಇಲ್ಲಿಯ ಮುಖ್ಯ ಉದ್ಯೋಗ ಯಾವದು? ಯಾವ ಬೆಳೆ ಹೆಚ್ಚು ಬರುವದು? ಬಾಗಲಕೋಟೆಯಿಂದ ಬಳ್ಳಾರಿಗೆ ಹೋಗುವಾಗ ಈ ತಾಲೂಕಿನಲ್ಲಿ ಹತ್ತುವ ಊರುಗಳಾವವು? ದೊಡ್ಡ ಊರುಗಳಾವವು? ಜಾತ್ರೆಯಾಗುವ ಊರುಗಳು ಯಾವವು? ಯಾವಾಗ ಆಗುವವು? ತರತಿಯಿಂದ ಸುದ್ದಿ ತಿಳಿಯುವ ಊರುಗಳಾವವು? ಇಲಕಲ್ಲಿಗೆ ಮೊದಲು ಯಾವ ಹೆಸರಿತ್ತು? ಈ ಊರು ಯಾಕೆ ಪ್ರಸಿದ್ಧವದೆ? ಕರಡಿ ಅಂತಾ ಹೆಸರು ಬರಲು ಕಾರಣವೇನು? ಐಹೊಳ್ಳಿಯ ಬಗ್ಗೆ ಗೊತ್ತಿದ್ದ ಸಂಗತಿಯನ್ನು ಹೇಳಿರಿ? ನಂದವಾಡಿಗಿಯು ಎಲ್ಲಿದೆ?

೨ನೆಯ ಭಾಗ

# ಮುಂಬಯಿ ಕರ್ನಾಟಕದ ಸಾಮಾನ್ಯ ವರ್ಣನೆ

ವಿಜಾಪುರ, ಬೆಳಗಾಂವಿ, ಧಾರವಾಡ, ಕಾರವಾರ ಈ ನಾಲ್ಕು ಜಿಲ್ಹೆಗಳೂ ಇವುಗಳಿಗೆ ಸಂಬಂಧಿಸಿದ ಸಂಸ್ಥಾನಗಳೂ ಕೂಡಿ ಮುಂಬಯಿ ಕರ್ನಾಟಕ ಪ್ರಾಂತವಾಗಿದೆ. ಈ ಭಾಗವು ಮುಂಬಯಿ ಇಲಾಖೆಗೆ ಸೇರಿದ್ದು ಅಸರಲ್ಲಿ ಮುಖ್ಯ ಭಾಷೆಯು ಕನ್ನಡವಾದುದರಿಂದಲೇ ಈ ಭಾಗಕ್ಕೆ ಮುಂಬಯಿ ಕರ್ನಾಟಕವೆಂದು ಅನ್ನುವರು.

**ಮೇರೆಗಳು:**—ಉತ್ತರಕ್ಕೆ ಸಾತಾರಾ, ಸೊಲ್ಲಾಪುರ ಜಿಲ್ಹೆಗಳು ಮತ್ತು ಅಕ್ಕಲಕೋಟ ಸಂಸ್ಥಾನ; ಪೂರ್ವಕ್ಕೆ ಮೊಗಲಾಯಿ ಮತ್ತು ಮದ್ರಾಸ ಇಲಾಖೆಗಳು; ದಕ್ಷಿಣಕ್ಕೆ ಮದ್ರಾಸ ಮತ್ತು ಮೈಸೂರ ಸಂಸ್ಥಾನ; ಪಶ್ಚಿಮಕ್ಕೆ ಗೋವೆ ಪ್ರಾಂತ, ಸಾವಂತವಾಡಿ ಸಂಸ್ಥಾನ, ರತ್ನಾಗಿರಿ ಜಿಲ್ಹೆ ಮತ್ತು ಅರಬೀ ಸಮುದ್ರ.

ಮುಂಬಯಿ ಕರ್ನಾಟಕದ ಕ್ಷೇತ್ರಫಲ ಅಜಮಾಸು ೨೫,೭೨೫ ಚೌರಸ ಮೈಲು ಇದೆ. ಜನಸಂಖ್ಯೆಯು ಸುಮಾರು ೪೭,೮೩,೪೩೧ ಇರುವದು.

**ಪ್ರಾಕೃತಿಕ:**-ಮುಂಬಯಿ ಕರ್ನಾಟಕದಲ್ಲಿ ಪ್ರಾಕೃತಿಕ ದೃಷ್ಟಿಯಿಂದ ನಾಲ್ಕು ಭಾಗಗಳನ್ನು ಮಾಡಬಹುದು. ಅವು ಯಾವವೆಂದರೆ:—

೧. ಸಮುದ್ರ ತೀರದ ಪ್ರದೇಶವು ಇದಕ್ಕೆ ಕೊಂಕಣವೆನ್ನುವರು. ೨. ಸಹ್ಯಾದ್ರಿಯ ಪ್ರದೇಶವು ಅಂದರೆ ಮಲ್ಲಾಡವು. ೩. ಮಲ್ಲಾಡ ಶೆರಗು. ೪. ಬಯಲು ಸೀಮೆ.

**೧. ಕೊಂಕಣವು:**—ಇದರಲ್ಲಿ ಸಮುದ್ರದ ಕಡೆಗಿರುವ ಭೂಮಿಯು ಉಸುಕಿನದು. ಸಹ್ಯಾದ್ರಿಯ ಕಡೆಗೆ ಬರುತ್ತ ಮಸಾರಿಯ ಭೂಮಿಯಿದೆ. ಸ್ವಲ್ಪ ಗರಸಿನ ನೆಲವೂ ಉಂಟು. ಇಲ್ಲಿಯ ಭೂಮಿ ನಿಸ್ಸಾರವಾದದ್ದು. ಗೊಬ್ಬರವಿಲ್ಲದೆ ಬೆಳೆಯುವದಿಲ್ಲ. ನಡನಡುವೆ ಸಹ್ಯಾದ್ರಿಯ ಗುಡ್ಡಗಳು

ಸಮುದ್ರದ ವರೆಗೆ ಸಾಗಿರುತ್ತವೆ. ಈ ಭಾಗದಿಂದ ಸಹ್ಯಾದ್ರಿಯನ್ನು ನೋಡಿದರೆ ಬಹು ಎತ್ತರವಾದ ಗೋಡೆಯಂತೆ ಕಾಣುವದು. ಅಂದರೆ ಸಹ್ಯಾದ್ರಿಯು ಪಶ್ಚಿಮದ ಕಡಿದಾಗಿರುತ್ತದೆ. ಕಾನಡಾ ಜಿಲ್ಹೆಯು ಸ್ವಲ್ಪ ಭಾಗವು ಕೊಂಕಣದಲ್ಲಿ ಬರುತ್ತದೆ.

೨. **ಸಹ್ಯಾದ್ರಿಯ ಪ್ರದೇಶವು (ಮಲ್ಲಾಡ):**–ಪರ್ವತ ಪ್ರದೇಶವೇ ಅಂದಮೇಲೆ ಕೇಳುವದೇನು? ಗುಡ್ಡಗಳ ಮಯವಾಗಿದೆ. ಕೊಳ್ಳಗಳಲ್ಲಿ ಮಿಶ್ರವಾದ ಕೆಂಪು ನೆಲವಿರುವದು. ಮೂರು ತಿಂಗಳುಗಳ ವರೆಗೆ ಮಳೆಯು ಸತತವಾಗಿ ಸುರಿಯುತ್ತಿರುತ್ತದೆ. ನಡುನಡುವೆ ಕೊಳ್ಳಗಳಲ್ಲಿ ಅಲ್ಪಸ್ವಲ್ಪ ಬೈಲುಪ್ರದೇಶವುಂಟು. ಬೆಳೆಯಲಿಕ್ಕೆ ಯೋಗ್ಯವಾದ ಘಟ್ಟದ ಮೇಲಿನ ಅಲ್ಪಸ್ವಲ್ಪ ಪ್ರದೇಶಗಳ ಹೊರತಾಗಿ ಎಲ್ಲ ಕಡೆಯಲ್ಲಿಯೂ ಬಹು ದಟ್ಟಾದ ಅಡವಿಯು ಬೆಳೆದಿದೆ. ಈ ಅಡವಿಗಳಲ್ಲಿ ತೆಂಗು, ಶಿಸವೇಕಟ್ಟಿಗೆ, ಶ್ರೀಗಂಧ, ಚಂದನ, ಬಿದರು ಇವೇ ಮುಖ್ಯವಾಗಿ ಒಳ್ಳೇ ಕಸುವಿಸಿಂದ ಹೆಚ್ಚಾಗಿ ಬೆಳೆಯುತ್ತವೆ ಈ ಅಡವಿಯಲ್ಲಿ ಬೆಳೆಯುವ ಪದಾರ್ಥಗಳಾದ ಸಾಗವಾನಿ ಕಟ್ಟಿಗೆ, ಮೆಣಸು, ಅಳಲೇಕಾಯಿ, ಶೀಗೆಕಾಯಿ, ಕಾಜು, ಅಂಟು, ಜೇನು ತುಪ್ಪ ಮುಂತಾದವುಗಳಿಂದ ನಮ್ಮ ಸರಕಾರಕ್ಕೆ ಬಹಳ ಉತ್ಪನ್ನವದೆ. ಕಾರವಾರ ಜಿಲ್ಹೆಯ ನಾಲ್ಕು ಭಾಗಗಳಲ್ಲಿ ಮೂರು ಭಾಗಗಳು ಈ ತರಹದ ಅರಣ್ಯಗಳ ಮಯವಾಗಿವೆ.

೩. **ಮಲ್ಲಾಡ ಶೆರಗು:**—ಸಹ್ಯಾದ್ರಿಯ ಪೂರ್ವ ಭಾಗದಿಂದ ಸುಮಾರು ೪೦-೫೦ ಮೈಲು ಅಗಲವಾಗಿರುವ ದಕ್ಷಿಣೋತ್ತರವಾದ ಪಟ್ಟಿಗೆ "ಮಲ್ಲಾಡ ಶೆರಗು" ಎಂಬ ಹೆಸರು. ಇದು ಬೈಲುಭೂಮಿಯೂ ಅಲ್ಲ; ಪರ್ವತಪ್ರದೇಶವೂ ಅಲ್ಲ. ಆದರೆ ಮಧ್ಯಮ ತರಗತಿಯ ಪ್ರದೇಶವಾಗಿದೆ. ಇಲ್ಲಿಯ ಭೂಮಿಯು ಮಡಿಕಟ್ಟಿನದು. ಗರಸು ಭೂಮಿಯು ಬಹಳ. ಪೂರ್ವಕ್ಕೆ ಬಂದಂತೆ ಎರೆಯು ಕೂಡಿದೆ. ನಡುನಡುವೆ ಸಹ್ಯಾದ್ರಿಯ ಶಾಖೆಗಳಾದ ಗುಡ್ಡಗಳು ಪೂರ್ವ-ಪಶ್ಚಿಮವಾಗಿ ಹಬ್ಬಿರುತ್ತವೆ. ಈ ಪ್ರದೇಶದಲ್ಲಿ ಕಾನಡಾ ಜಿಲ್ಹೆಯ ಘಟ್ಟದ ಮೇಲಿನ ಶಿರಸಿ, ಸಿದ್ದಾಪುರ, ಎಲ್ಲಾಪುರ, ಹಳಿಯಾಳ ಎಂಬ ತಾಲೂಕುಗಳೂ, ಧಾರವಾಡ ಜಿಲ್ಹೆಯ ಪಶ್ಚಿಮ ಭಾಗವೂ, ಬೆಳಗಾಂವ ಜಿಲ್ಹೆಯ ನೈಋತ್ಯ ಭಾಗವೂ ಸೇರಿವೆ.

**೪. ಬಯಲುಸೀಮೆ:**—ಧಾರವಾಡ, ಬೆಳಗಾಂವ ಜಿಲ್ಹೆಗಳ ಪೂರ್ವ ಭಾಗಗಳೂ, ವಿಜಾಪುರ ಜಿಲ್ಹೆಯೂ, ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳ ಪ್ರದೇಶದ ಪೂರ್ವಭಾಗವೂ ಸೇರಿ 'ಬಯಲುಸೀಮೆ' ಎಂಬ ಭಾಗವಾಗಿ ರುತ್ತದೆ. ಇಲ್ಲಿಯ ಭೂಮಿಯು ಎಲ್ಲವೂ ಬೈಲಾದದ್ದು. ಕೆಲವು ಕಡೆಗೆ ತೆರೆಗಳ ಹಾಗೆ ತೆಗ್ಗು-ದಿನ್ನೆಗಳುಳ್ಳದಾಗಿದೆ. ಸ್ವಲ್ಪ ಗುಡ್ಡಗಳಿವೆ. ಉತ್ತಮ ವಾದ ಎರೆಯು ಮುಖ್ಯವು. ಸ್ವಲ್ಪ ಗರಸಿನ ನೆಲವುಂಟು. ಗುಡ್ಡಗಳ ನೆರೆಯಲ್ಲಿ ಮಸಾರಿಯ ಭೂಮಿಯೂ ಇರುತ್ತದೆ.

**ಪರ್ವತ:**—ಮುಂಬಯಿ ಕರ್ನಾಟಕದಲ್ಲಿ ಸಹ್ಯಾದ್ರಿ ಪರ್ವತ ಅಥವಾ ಪಶ್ಚಿಮಘಟ್ಟವೂ, ಅದರ ಶಾಖೆಗಳಾದ ಕಪ್ಪತಗುಡ್ಡ, ಎಲ್ಲಮ್ಮನ ಗುಡ್ಡಗಳೂ ಹಬ್ಬಿರುತ್ತವೆ. ಸಹ್ಯಾದ್ರಿ ಪರ್ವತವು ದಕ್ಷಿಣೋತ್ತರವಾಗಿ ಹಬ್ಬಿದೆ. ಪಶ್ಚಿಮಭಾಗದ ಸಮೀಪದಲ್ಲಿಯೇ ಸಮುದ್ರವುಂಟು. ಈ ಪರ್ವತದ ಪೂರ್ವಭಾಗವೇ ಇಳುಕಲಾಗಿದ್ದುದರಿಂದ ಪಶ್ಚಿಮಘಟ್ಟದಲ್ಲಿ ಹುಟ್ಟಿದ ನದಿಗಳು ಆ ಭಾಗದ ಕಡೆಗೆನೇ ಉದ್ದವಾಗಿ ಹರಿದಿರುತ್ತವೆ. ಪಶ್ಚಿಮಘಟ್ಟ ದಲ್ಲಿ ಕೆಲವು ಮಾರ್ಗಗಳಿದ್ದು ಅವುಗಳಿಗೆ **ಘಟ್ಟದ ಮಾರ್ಗಗಳೆನ್ನು**ವರು. ಅವು ಯಾವವೆಂದರೆ:—

೧. **ಅಂಬೇಘಟ್ಟ:**—ಇದು ಕೊಲ್ಹಾಪುರದಿಂದ ರತ್ನಾಗಿರಿಗೆ ಹೋಗುವ ಮಾರ್ಗದಲ್ಲಿದೆ.

೨. **ಆಂಬೋಲಿಘಟ್ಟ:**—ಇದು ಬೆಳಗಾಂವಿಯಿಂದ ವೆಂಗುರ್ಲೆಗೆ ಹೋಗುವ ಮಾರ್ಗದಲ್ಲಿದೆ.

೩. **ತಿನ್ನೈಘಟ್ಟ:**—ಇದು ಬೆಳಗಾಂವಿಯಿಂದ ಗೋವೆಗೆ ಹೋಗುವ ಮಾರ್ಗದಲ್ಲಿದೆ.

೪. **ಅರಬೈಲಘಟ್ಟ:**—ಇದು ಧಾರವಾಡದಿಂದ ಕಾರವಾರಕ್ಕೆ ಹೋಗುವ ಮಾರ್ಗದಲ್ಲಿದೆ.

೫. **ದೇವೀಮನಿಘಟ್ಟ:**—ಇದು ಸಿರಸಿಯಿಂದ ಕುಮಠೆಗೆ ಹೋಗುವ ಮಾರ್ಗದಲ್ಲಿದೆ.

೬. **ಮಲೆನಾಡಘಟ್ಟ:**—ಇದು ಸಿದ್ದಾಪುರದಿಂದ ಗೆರಸೊಪ್ಪೆಗೆ ಹೋಗುವ ಮಾರ್ಗದಲ್ಲಿದೆ.

**ಹೊಳೆಗಳು :**—ಕೃಷ್ಣಾ, ಭೀಮಾ, ಘಟಪ್ರಭಾ, ಮಲಪ್ರಭಾ, ಬೆಣ್ಣಿಹಳ್ಳ, ತುಂಗಭದ್ರಾ, ವರದಾ, ಧರ್ಮಾ, ಶಾಲ್ಮಲಾ, ಶರಾವತಿ, ಧರ್ಮಾ, ತುಂಗಭದ್ರಾ ನದಿಗಳಿಂದ ಕಾಲುವೆಗಳನ್ನು ಮಾಡಿಕೊಂಡು ಹೆಚ್ಚಾಗಿ ಭೂಮಿಯನ್ನು ಸಾಗುಮಾಡಿಕೊಳ್ಳುವರು.

**ಮಳೆಯು :**—ನಮ್ಮ ಕಡೆಗೆ ಬರುವ ಮುಂಗಾರಿ ಮಳೆಯ ಗಾಳಿಗಳು ಅರಬೀ ಸಮುದ್ರದಿಂದ ಬೀಸುವ ಕಾರಣ ಮಗ್ಗಲಲ್ಲಿ ಎಲ್ಲಕ್ಕೂ ಎತ್ತರವಾದ ಸಹ್ಯಾದ್ರಿ ಪರ್ವತವಿದ್ದುದರಿಂದ ಪಕ್ಕದಲ್ಲಿಯೇ ಇರುವ ಕೊಂಕಣದಲ್ಲಿ ಮಳೆ ಹೆಚ್ಚು ಆಗುವದು. ಎತ್ತರವಾದ ಪರ್ವತಗಳನ್ನು ಮೋಡಗಳು ದಾಟುವಾಗ ತಂಪು ತಗಲಲು, ಅಲ್ಲಿ ಮಳೆ ಹೆಚ್ಚು ಬೀಳುವದು. ಮಲ್ಲಾಡ ಶಿರಗಿನಲ್ಲಿ ಮಳೆ ಹೆಚ್ಚು ಬೀಳಲು ಇದೇ ಕಾರಣ. ಬೈಲುಸೀಮೆಯಲ್ಲಿ ಮಳೆಯು ಬಹಳ ಕಡಿಮೆ ಬೀಳುವದು.

**ಹವೆಯು :**—ಕೊಂಕಣದ ಹವೆಯು ಉಷ್ಣವೂ, ತೇವುಳ್ಳದ್ದೂ ಇದ್ದು ಸಾಧಾರಣ ಆರೋಗ್ಯಕರವಾದದ್ದೂ, ಸೌಮ್ಯವೂ ಆಗಿದೆ. ಮಲ್ಲಾಡದ ಹವೆಯು ತಂಪೂ, ರೋಗಕಾರಕವೂ ಇದೆ. ಆದರೆ ಬೇಸಿಗೆಯಲ್ಲಿ ಹಿತಕರ. ಬೈಲುಸೀಮೆಯ ಹವೆಯು ಉಷ್ಣತೆಯುಳ್ಳದ್ದು. ತೇವು ಕಡಿಮೆ ಇದ್ದು, ಆರೋಗ್ಯಕಾರಕವಿರುತ್ತದೆ. ಮಲೆನಾಡ ಹವೆಯು ಸಾಧಾರಣ ವಿಷಮಯವಾಗಿರುತ್ತದೆ.

**ಬೆಳೆಗಳು :**—ಇಡೀ ಮುಂಬಯಿ ಕರ್ನಾಟಕದಲ್ಲಿ ಮಳೆ, ಹವೆ, ಭೂಮಿಗಳು ಚನ್ನಾಗಿವೆ. ತಮಗೆ ಅನುಕೂಲವಾದ ಬೆಳೆ ತಕ್ಕೊಳ್ಳುವರು. ಅವು ಯಾವವೆಂದರೆ—ಅಡಿಕೆ, ತೆಂಗು, ಭತ್ತ, ಕಬ್ಬು, ಯಾಲಕ್ಕಿ, ಮೆಣಸು, ಹತ್ತಿ, ರಾಗಿ, ಗೋದಿ, ಜೋಳ, ಕಡಲೆ, ಎಣ್ಣೆಕಾಳು, ಸಾವಿ, ನಾರು, ಸೇಂಗಾ, ಸಾಗವಾನಿ ಮತ್ತು ಶಿಸವೇ ಕಟ್ಟಿಗೆಗಳು.

**ಪ್ರಾಣಿ ಮುಂತಾದವುಗಳು :** -ಎತ್ತು, ಆಕಳುಗಳು ಬೈಲುಸೀಮೆಯಲ್ಲಿ ಬಹಳ. ಕೊಂಕಣದಲ್ಲಿ ಆಹಾರ, ಹವೆ ತಡೆಯಲಾರದ್ದರಿಂದ ದನಗಳು ಬದುಕುವುದಿಲ್ಲ. ಕುದುರೆಗಳಂತೂ ಇಲ್ಲಿ ಬಾಳುವುದೇ ಇಲ್ಲ. ಆದರೆ ಮಲ್ಲಾಡ ಶಿರಗಿನಲ್ಲಿ ಎಮ್ಮೆ, ಕೋಣಗಳು ಹೆಚ್ಚು. ಕೃಷ್ಣಾತೀರದ ಎತ್ತು

ಬಹು ಪ್ರಸಿದ್ಧ. ಅವುಗಳಲ್ಲಿ ಕಿಲಾರಿ ಎತ್ತು, ಹೊಳಿಸಾಲ ಎತ್ತುಗಳು ಬಹು ಪ್ರಸಿದ್ಧವಾಗಿರುವವು. ಸಹ್ಯಾದ್ರಿ ಪರ್ವತದಲ್ಲಿ ಆನೆ, ಹುಲಿ, ಕರಡಿ, ಹೊನಗ್ಯಾ, ಕಾಡಾನೆ, ಕಾಡಹಂದಿ, ಚಿಗರಿ, ಒಂಟಿಗಳು ಬಹಳ. ಬೈಲು ಸೀಮೆಯಲ್ಲಿ ಎತ್ತು, ಆಕಳು, ಎಮ್ಮೆಗಳು ಮುಖ್ಯ.

**ಜನರ ನಡಾವಳಿ ಮತ್ತು ಇರುಪಿಕೆ:—** ಕೊಂಕಣ, ಮಲೆನಾಡು ಗಳಲ್ಲಿ ಭೂಮಿ ಕಡಿಮೆ ಇರುವದರಿಂದಲೂ, ಅಲ್ಲಿ ಆನೆ, ಕಾಡಹಂದಿ, ಮಂಗ, ಚಿಗರಿಗಳ ಉಪದ್ರವು ಬಹಳವಿರುವದರಿಂದಲೂ ಇಲ್ಲಿ ಬಡತನವೇ ಹೆಚ್ಚು. ಅಕ್ಕಿಯೇ ಇವರ ಆಹಾರವಾದ್ದರಿಂದ ಶಕ್ತಿಹೀನರು. ಇಲ್ಲಿ ಹಂಚಿನ ಮನೆ ಗಳೇ ಹೆಚ್ಚು. ಬೈಲುಸೀಮೆಯಲ್ಲಿ ಮಾತ್ರ ಮೇಲಿನ ಎಲ್ಲವುಗಳ ವಿರುದ್ಧ ನಡೆಯುವದು. ಬೆಳಗಾಂವ, ಧಾರವಾಡ ಜಿಲ್ಹೆಗಳಲ್ಲಿ ವಿದ್ಯಾಭ್ಯಾಸಕ್ಕೆ ಹೆಚ್ಚು ಸವಲತ್ತು ಕೊಡಲ್ಪಟ್ಟಿರುವದರಿಂದ ಅವರು ಮುಂದುವರಿದಿದ್ದಾರೆ. ವಿಜಾಪುರ ಜಿಲ್ಹೆಯಲ್ಲಿ ಈ ತರಹದ ಸವಲತ್ತುಗಳು ಕಡಿಮೆ.

**ಉದ್ಯೋಗ:—** ಕೊಂಕಣದಲ್ಲಿ ಮೀನು ಹಿಡಿಯುವದೇ ಹೆಚ್ಚು. ಸ್ವಲ್ಪ ಒಕ್ಕಲತನ ಮಾಡುವರು. ಕಾರವಾರ, ಧಾರವಾಡ ಜಿಲ್ಹೆಗಳ ಪಶ್ಚಿಮ ಭಾಗದಲ್ಲಿಯ ಮಲೆನಾಡು ಪ್ರದೇಶದಲ್ಲಿ ಒಕ್ಕಲತನ, ಕೈಗಾರಿಕೆಗಳೇ ಮುಖ್ಯ ಉದ್ಯೋಗಗಳು. ಇಲ್ಲಿ ಒಕ್ಕಲತನದಲ್ಲಿ ಅಷ್ಟು ಉತ್ಪನ್ನವಿಲ್ಲದ್ದರಿಂದ ಕಟ್ಟಿಗೆ, ಕೊಡ, ಚಾಪಿ, ಹಗ್ಗ, ನಾಗಬೆತ್ತದ ಹೆಣಿಕೆ ಮುಂತಾದ ಕೈಗಾರಿಕೆಯಿಂದಲೇ ಹೆಚ್ಚು ಜನರು ಉಪಜೀವಿಸುವರು. ಆದರೆ ವಿಜಾಪುರ ಜಿಲ್ಹೆಯ ಬೈಲು ಸೀಮೆಯಲ್ಲಿ ಎಲ್ಲ ತರದ ನೂಲು, ರೇಶಿಮೆ, ಉಣ್ಣೆ, ಅರಿವೆಗಳನ್ನು ಉತ್ತಮ ರೀತಿಯಿಂದ ನೇಯುವ ಉದ್ಯೋಗವೇ ಹೆಚ್ಚು. ಇಲ್ಲಿ ಭೂಮಿಗಳು ಬಹಳ ಕಸುವುಳ್ಳವು ಇರುದದರಿಂದ ಒಕ್ಕಲತನವಾದರೂ ಹೆಚ್ಚಿಗೆ ಇಲ್ಲಿಯ ಜನರು ದುಡಿತದಷ್ಟು ಸುಖದಿಂದ ಉಣ್ಣುವದು ಕಡಿಮೆ. ನ್ಯಾಯಕ್ಕಾಗಿ ಹೆಚ್ಚು ಖರ್ಚು ಮಾಡುವರು. ಇವರು ಕಸುವುಳ್ಳವರು, ಉದ್ಯೋಗಿಗಳು, ನಿರೋಗಿಗಳು ಇರುವರು.

**ಜಾತಿ, ಧರ್ಮ, ಭಾಷೆ:—** ಇಲ್ಲಿ ಹಿಂದು, ಮುಸಲ್ಮಾನ, ಕ್ರೈಸ್ತ ಮುಂತಾದ ಜಾತಿಗಳುಂಟು. ಜಾತಿಗಳಲ್ಲಿ ಪಂಗಡಗಳಾಗಿದ್ದರಿಂದ ಅವಕ್ಕೆ

ಪಂತವೆನ್ನುವರು. ಬ್ರಾಹ್ಮಣ, ವೀರಶೈವ, ಜೈನ, ಕುರುಬ, ತಿಗಳ, ವೈಶ್ಯ, ರಜಪುತ, ಮುದ್ಲಿಯಾರ ಎಂಬ ಜಾತಿಗಳು ಉಂಟು. ಇಲ್ಲಿ ಮುಖ್ಯವಾಗಿ ಕನ್ನಡ, ಮರಾಠಿ, ಮುಸಲ್ಮಾನಿ, ಇಂಗ್ಲೀಷ ಭಾಷೆಗಳುಂಟು.

**ವ್ಯಾಪಾರ:**—ಅಕ್ಕಿ, ಬೆಲ್ಲ, ತಂಬಾಕ, ಅರಿಷಿಣ, ಮೆಣಸಿನಕಾಯಿ, ತೆಂಗು, ಕೊಬ್ಬರಿ ಎಣ್ಣಿ, ಯಾಲಕ್ಕಿ, ಮೆಣಸು, ಅಡಿಕೆ, ತೇಗು, ಶ್ರೀಗಂಧ, ಚಂದನದ ಕಟ್ಟಿಗೆ, ಎಲುವು, ಮೀನ, ಚರ್ಮ ಇವು ಕೊಂಕಣ, ಮಲೆನಾಡು ಗಳಿಂದ; ಇದರಂತೆ ಬೈಲುಸೀಮೆಯಿಂದ ಗೋದಿ, ಕಡಲೆ, ಹತ್ತಿ, ಜೋಳ, ಹತ್ತಿಕಾಳು, ಸೇಂಗಾ, ಎಳ್ಳು, ಅಗಸಿ, ಸೆಜ್ಜಿ ಮುಂತಾದವು ಪರಸ್ಥಳಕ್ಕೆ ಹೋಗುವವು.

## ಉಗಿಬಂಡಿಗಳ ಮಾರ್ಗಗಳು

**೧. ಮದ್ರಾಸ ಮತ್ತು ಸದರ್ನ ಮರಾಠಾ ರೇಲ್ವೆ:**—ಇದು ಪುಣೆ ಯಿಂದ ಹೊರಟು ಸಾತಾರೆಯ ವರೆಗೆ ಬಂದು, ಮುಂದೆ ಸಾಂಗಲಿ, ಮಿರಜ, ಬೆಳಗಾಂವ, ಲೋಂಡಾ, ಧಾರವಾಡ, ಹುಬ್ಬಳ್ಳಿ, ಗದಗಗಳ ಮೇಲಿಂದ ಮದ್ರಾಸಕ್ಕೆ ಹೋಗಿದೆ. ಅಲ್ಲದೆ, ಈ ಮಾರ್ಗದಿಂದ ಮೂರು ಶಾಖೆಗಳು ಹೋಗಿರುತ್ತವೆ. ಅವು ಯಾವವೆಂದರೆ:—

೧. ಲೋಂಡಾದಿಂದ ಪಶ್ಚಿಮಕ್ಕೆ ಗೋವೆಯ ಕಡೆಗೆ.
೨. ಹುಬ್ಬಳ್ಳಿಯಿಂದ ಹರಿಹರ ಮಾರ್ಗವಾಗಿ ಬೆಂಗಳೂರ ಕಡೆಗೆ.
೩. ಹುಬ್ಬಳ್ಳಿಯಿಂದ ಗದಗ, ಬಾಗಲಕೋಟ, ವಿಜಾಪುರಗಳ ಮೇಲಿಂದ ಹುಟಗಿ, ಸೊಲ್ಲಾಪುರಗಳ ಕಡೆಗೆ.

**೨. ಕೊಲ್ಹಾಪುರ ಸ್ಟೇಟ ರೇಲ್ವೆ:**—ಇದು ಮಿರಜದಿಂದ ಪಶ್ಚಿಮಕ್ಕೆ ಕೊಲ್ಹಾಪುರದ ವರೆಗೆ ಹೋಗಿದೆ.

## ಜಲಮಾರ್ಗಗಳು

ಮುಂಬಯಿ ಕರ್ನಾಟಕದಲ್ಲಿ ಕಾರವಾರ ಜಿಲ್ಹೆಯು ಅರಬಿಸಮುದ್ರಕ್ಕೆ ಹೊಂದಿದೆ. ಆ ಭಾಗದಲ್ಲಿ ಕಾರವಾರ, ಕುಮಟಾ, ಹೊನ್ನಾವರ, ಬಟಕಳ ಎಂಬ ಬಂದರಗಳು ಇರುತ್ತವೆ. ಇವುಗಳ ಉತ್ತರಕ್ಕೆ ಮಾರ್ಮಗೋವಾ,

ವೆಂಗುರ್ಲೆ, ಮುಂಬಯಿಗಳ ಕಡೆಗೂ, ದಕ್ಷಿಣಕ್ಕೆ ಮಂಗಳೂರು ಮುಂತಾದವುಗಳ ಮೇಲಿಂದ ಸಿಂಹಳದ್ವೀಪಕ್ಕೂ ಹೋಗಲಿಕ್ಕೆ ಜಲಮಾರ್ಗದ ಅನುಕೂಲತೆ ಇರುತ್ತದೆ.

## ಲೈನಮಾರ್ಗಗಳು

೧. ಪುಣೆಯಿಂದ ಮೈಸೂರು ಸೀಮೆಯಲ್ಲಿ ಹಾಯ್ದು ಹರಿಹರ ಕಡೆಗೆ ಹೋಗಿದೆ. ಹಾದಿಯಲ್ಲಿ ಹತ್ತುವ ಊರುಗಳು:—ಸಾಂಗಲಿ, ಮಿರಜ, ಚಿಕ್ಕೋಡಿ, ಬೆಳಗಾಂವ, ಧಾರವಾಡ, ಹುಬ್ಬಳ್ಳಿ, ಹಾವೇರಿ, ರಾಣೇಬಿನ್ನೂರ.

೨. **ಹುಬ್ಬಳ್ಳಿಯಿಂದ ಸೊಲ್ಲಾಪುರ ಮಾರ್ಗ:**—ಧಾರವಾಡ, ಸವದತ್ತಿ, ನರಗುಂದ, ಕೆರೂರ, ವಿಜಾಪುರ, ಇಂಡಿಗಳ ಮೇಲಿಂದ ಹೋಗಿದೆ.

೩. **ಹುಬ್ಬಳ್ಳಿಯಿಂದ ಬಳ್ಳಾರಿ ಮಾರ್ಗ:**—ಗದಗ, ಮುಂಡರಗಿಗಳ ಮೇಲಿಂದ ಹೋಗಿದೆ.

೪. **ಹುಬ್ಬಳ್ಳಿಯಿಂದ ಕುಮುಠಾ ಬಂದರ ಮಾರ್ಗ:**—ತಡಸ, ಹಾನಗಲ್ಲ, ಸಿರಸಿಗಳ ಮೇಲಿಂದ ಹೋಗಿದೆ.

ಇವಲ್ಲದೆ ಧಾರವಾಡದಿಂದ ಬೆಳಗಾಂವ, ಕಾರವಾರ, ಗೋವಾ, ವೆಂಗುರ್ಲೆ, ಗೋಕರ್ಣ, ಮಹಾಬಳೇಶ್ವರಗಳ ಕಡೆಗೂ ಲೈನಮಾರ್ಗಗಳು ಹೋಗಿವೆ.

# ರಾಜಕೀಯ ವಿಭಾಗಗಳು

(೧) ವಿಜಾಪುರ, (೨) ಬೆಳಗಾಂವ, (೩) ಧಾರವಾಡ, (೪) ಕಾರವಾರ ಎಂಬ ನಾಲ್ಕು ಜಿಲ್ಹೆಗಳೂ, ಕೊಲ್ಹಾಪುರ ಸಂಸ್ಥಾನ, ಉತ್ತರಕರ್ನಾಟಕದ ಜಹಾಗೀರುಗಳೂ, ಜತ್ತ, ಸವಣೂರ ಸಂಸ್ಥಾನಗಳೂ ಉಂಟು.

**ಜತ್ತ ಸಂಸ್ಥಾನ** :—ಇದು ವಿಜಾಪುರ ಜಿಲ್ಹೆಯ ಪಶ್ಚಿಮಕ್ಕೆ ಇರುತ್ತದೆ. ಇದರ ಮಾಂಡಲಿಕನು ಢವಳೆ ಎಂಬ ಮರಾಠಿ ಜಾತಿಯವನು. ಇದು ಮೊದಲು ಸಾತಾರೆ ಜಿಲ್ಹೆಗೆ ಸೇರಿತ್ತು. ವಿಜಾಪುರ ಜಿಲ್ಹೆಯ ಕಲೆಕ್ಟರನೇ ಇದರ ಪೊಲಿಟಿಕಲ್ ಏಜಂಟನು. ಇಲ್ಲಿ ನೆರೆಯ ಜಿಲ್ಹೆಗಳಲ್ಲಿ ಹುಟ್ಟುವ ಧಾನ್ಯಗಳು ಹುಟ್ಟುವವಲ್ಲದೆ ಸೋರುಪ್ಪು, ಕಬ್ಬಿಣಗಳೂ ಹುಟ್ಟುತ್ತವೆ.

## ಬೆಳಗಾಂವ ಜಿಲ್ಹೆ

**ಮೇರೆಗಳು** :—ಉತ್ತರಕ್ಕೆ ಮಿರಜಿ, ಸಾಂಗಲಿ, ಜತ್ತ ಜಹಾಗೀರುಗಳು ಮತ್ತು ಸಾತಾರೆ ಜಿಲ್ಹೆ; ಪೂರ್ವಕ್ಕೆ ಜಮಖಂಡಿ, ಮುಧೋಳ, ರಾಮದುರ್ಗ ಸಂಸ್ಥಾನಗಳು; ಪಶ್ಚಿಮಕ್ಕೆ ಗೋವೆ ಪ್ರಾಂತ, ಸಾವಂತವಾಡಿ, ಕೊಲ್ಹಾಪುರ ಸಂಸ್ಥಾನಗಳು; ದಕ್ಷಿಣಕ್ಕೆ ಕಾರವಾರ, ಧಾರವಾಡ ಜಿಲ್ಹೆಗಳು.

ಈ ಜಿಲ್ಹೆಯಲ್ಲಿ ೧ ಬೆಳಗಾಂವ, ೨ ಚಿಕ್ಕೋಡಿ, ೩ ಖಾನಾಪುರ, ೪ ಗೋಕಾವಿ, ೫ ಅಥಣಿ, ೬ ಬೈಲಹೊಂಗಲ, ೭ ಸವದತ್ತಿ (ಪರಸಗಡ), ೮ ಹುಕ್ಕೇರಿ ಎಂಬ ಎಂಟು ತಾಲೂಕುಗಳೂ, ಚಂದಗಡ ಎಂಬ ಒಂದು ಪೇಠಾ ಇರುತ್ತವೆ.

**ಭೂಮಿಯ ಸ್ವರೂಪ** :—ಉತ್ತರ, ಪೂರ್ವ ಭಾಗಗಳಲ್ಲಿ ಭೂಮಿ ಸಮವಾದದ್ದೂ, ಬೆಳೆಯುಳ್ಳದ್ದೂ ಉಂಟು. ದಕ್ಷಿಣ, ಪಶ್ಚಿಮ ಭಾಗಗಳಲ್ಲಿ ಗುಡ್ಡಗಳು ಬಹಳ. ದಕ್ಷಿಣಕ್ಕೆ ಸಹ್ಯಾದ್ರಿಯ ಶಾಖೆಗಳು ನಡುನಡುವೆ ಹಬ್ಬಿರುತ್ತವೆ. ಇವುಗಳ ಮೇಲೆ ದಟ್ಟಾದ ಅಡವಿಯು ಬೆಳೆದಿದೆ.

**ನದಿಗಳು** :—ಉತ್ತರದಲ್ಲಿ ಕೃಷ್ಣಾ ನದಿ, ಮಧ್ಯದಲ್ಲಿ ಘಟಪ್ರಭಾ ನದಿ, ದಕ್ಷಿಣದಲ್ಲಿ ಮಲಾಪಹಾರಿ ನದಿ ಮತ್ತು ಘಟಪ್ರಭಾ ಶಾಖೆಗಳಾದ ಮಾರ್ಕಾಂಡೆ, ಹರಣಕಾಶಿ, ತಾಮ್ರಪರ್ಣಿ ನದಿಗಳು ಉಂಟು.

**ಉದ್ಯೋಗ** :—ಒಕ್ಕಲತನ, ನೇಕಾರಿಕೆ, ವ್ಯಾಪಾರಗಳೇ ಈ ಜಿಲ್ಹೆಯ ಮುಖ್ಯ ಉದ್ಯೋಗಗಳು. ಗೋಕಾವಿಯಲ್ಲಿ ಕಟ್ಟಿಗೆಯ ಬಣ್ಣದ ಸಾಮಾನುಗಳೂ, ತಾಮ್ರ–ಹಿತ್ತಾಳಿ ಪಾತ್ರೆಗಳೂ ತಯಾರಾಗುತ್ತವೆ.

**ಮುಖ್ಯ ಊರುಗಳ ವರ್ಣನೆ** :—**ಬೆಳಗಾಂವಿಯು** ಈ ಜಿಲ್ಹೆಯ ಮುಖ್ಯ ಸ್ಥಳ. ಇಲ್ಲಿ ದಂಡಿನ ಛಾವಣಿಯುಂಟು. ಈ ಊರ ಸುತ್ತಲೂ

ಕೋಟಿ ಇದ್ದು, ಚನ್ನಾಗಿರುತ್ತದೆ. ಇಲ್ಲಿ ಕಮೀಶನರರ ಕಚೇರಿ ಉಂಟು. ಶಹಾಪುರ (ಸಾಂಗಲಿ ಸಂಸ್ಥಾನದವರದು) ದಲ್ಲಿ ತಯಾರಾಗುವ ಬಂಗಾರ ಹಾಗು ಬೆಳ್ಳಿ ಸಾಮಾನುಗಳ, ರೇಶಿಮೆ ಅರಿವೆಗಳ ವ್ಯಾಪಾರವು ಈ ಊರಲ್ಲಿ ಚನ್ನಾಗಿ ನಡೆಯುವದು. **ಸಂಕೇಶ್ವರ, ನಿಪ್ಪಾಣಿ, ಅಥಣಿ**ಗಳಲ್ಲಿ ಬೆಲ್ಲ, ತಂಬಾಕಗಳ ವ್ಯಾಪಾರವು ಹೆಚ್ಚಾಗಿ ಆಗುವದು. ಸಂಕೇಶ್ವರದಲ್ಲಿ ಶಂಕರಾಚಾರ್ಯರದೊಂದು ಮಠವದೆ. **ಗೋಕಾಕ**ದಲ್ಲಿ ಘಟಪ್ರಭೆಯ ತಡಸಲವುಂಟು. ಇಲ್ಲಿ ಗಿರಣಿಯಿಂದ ನೂಲು ತೆಗೆಯುವರು. **ಸವದತ್ತಿ**ಯಲ್ಲಿ ವ್ಯಾಪಾರವೂ, ದನಗಳ ಸಂತೆಯೂ ತಕ್ಕಮಟ್ಟಿಗೆ ನಡೆಯುವವು. ಈ ಊರ ಹತ್ತರ ಗುಡ್ಡದ ಮೇಲೆ ಎಲ್ಲಮ್ಮನ ದೇವಸ್ಥಾನವುಂಟು. ವರ್ಷದಲ್ಲಿ ೩-೪ ಸಾರೆ ಈ ಯಲ್ಲಮ್ಮನ ಜಾತ್ರೆಯಾಗುವದು. **ಮುರಗೋಡ**ದಲ್ಲಿ ಅಚ್ಚು ಹಾಕಿದ ಬಟ್ಟೆಗಳೂ, ಕರಳೆ ಹಚ್ಚಡಗಳೂ ತಯಾರಾಗುತ್ತವೆ. **ನಿಪ್ಪಾಣಿ, ಕಿತ್ತೂರು**ಗಳು ಮೊದಲು ದೇಸಾಯರ ಗ್ರಾಮಗಳಾಗಿದ್ದವು. ಬೈಲಹೊಂಗಲ, ಯಮಕನಮರಡಿಗಳು ದೊಡ್ಡ ಊರುಗಳು. ನಿಡಶೋಸಿ, ಅರಭಾವಿಗಳಲ್ಲಿಯ ಮಠಗಳು ಪ್ರಸಿದ್ಧ. **ಖಾನಾಪುರ**ದಲ್ಲಿ ಮೇಲಾದ ಮಣ್ಣು ಸಿಗುವದು. ಈ ಮಣ್ಣಿನಿಂದ ತರತರದ ಪಾತ್ರೆಗಳೂ, ಮಾಳಿಗೆಯ ಹಂಚುಗಳೂ ತಯಾರಾಗುತ್ತವೆ. **ಮುನವಳ್ಳಿ**ಯಲ್ಲಿ ಸುಮಾರು ೭-೮ ನೂರು ತೋಟಗಳಿದ್ದು ಹಣ್ಣುಹಂಪಲಗಳ ವ್ಯಾಪಾರವು. ಚನ್ನಾಗಿ ನಡೆದಿದೆ.

## ಧಾರವಾಡ ಜಿಲ್ಹೆ

**ಮೇರೆಗಳು:**— ಉತ್ತರಕ್ಕೆ ಬೆಳಗಾಂವ, ವಿಜಾಪುರ ಜಿಲ್ಹೆಗಳು; ದಕ್ಷಿಣಕ್ಕೆ ಮೈಸೂರ ಸಂಸ್ಥಾನ; ಪೂರ್ವಕ್ಕೆ ನಿಜಾಮನ ರಾಜ್ಯ ಮದ್ರಾಸ ಇಲಾಖೆ; ಪಶ್ಚಿಮಕ್ಕೆ ಕಾರವಾರ ಜಿಲ್ಹೆ.

**ನದಿಗಳು:**— ಉತ್ತರಭಾಗದಲ್ಲಿ ಮಲಾಪಹಾರಿ ನದಿಯು ಹರಿದಿರುತ್ತದೆ. ಮಧ್ಯಭಾಗದಲ್ಲಿ ವರದಾ ನದಿಯು ಪೂರ್ವಕ್ಕೆ ಹರಿದು ತುಂಗಭದ್ರೆಗೆ ಕೂಡುತ್ತದೆ. ಪೂರ್ವಭಾಗದಲ್ಲಿ ತುಂಗಭದ್ರಾ ನದಿಯು ಮೈಸೂರು ಸೀಮೆಯಿಂದ ಉತ್ತರಕ್ಕೆ ಹರಿದು, ನಿಜಾಮನ ರಾಜ್ಯದಲ್ಲಿ ಸೇರಿ, ರಾಯಚೂರ ಹತ್ತರ ಕೃಷ್ಣಾ ನದಿಗೆ ಕೂಡುತ್ತದೆ. ಬೆಣಿಹಳ್ಳವೆಂಬದೊಂದು ಉಪ್ಪು

ನೀರಿನ ಹಳ್ಳವು ಇದೇ ಜಿಲ್ಹೆಯಲ್ಲಿ ಹುಟ್ಟಿ, ಪೂರ್ವಕ್ಕೆ ಹರಿದು, ಇದೇ ಜಿಲ್ಹೆಯಲ್ಲಿ ಮಲಾಪಹಾರಿ ನದಿಗೆ ಕೂಡುತ್ತದೆ. ಶಾಲ್ಮಲಾ ನದಿಯು ಇದೇ ತಾಲೂಕಿನಲ್ಲಿ ಹುಟ್ಟಿ, ಪಶ್ಚಿಮ ಸಮುದ್ರಕ್ಕೆ ಕೂಡುವದು.

**ಭೂಮಿಯ ಸ್ವರೂಪ:—** ಈ ಜಿಲ್ಹೆಯ ಪಶ್ಚಿಮಭಾಗದಲ್ಲಿ ತೆಗ್ಗು ದಿನ್ನೆಗಳೂ, ಗುಡ್ಡಗಳೂ ಬಹಳುಂಟು. ಪೂರ್ವಭಾಗವು ಬಹುತರ ಸಮ ನೆಲವುಳ್ಳದ್ದು ಇದ್ದು, ಬೆಳೆಯು ಉತ್ತಮ ಬರುವದು. ಎರೆನೆಲ ಹೆಚ್ಚು.

ಈ ಜಿಲ್ಹೆಯಲ್ಲಿ ೧ ಧಾರವಾಡ, ೨ ಹುಬ್ಬಳ್ಳಿ, ೩ ನವಲಗುಂದ, ೪ ರೋಣ, ೫ ಗದಗ, ೬ ಕಲಘಟಗಿ, ೭ ಬಂಕಾಪುರ, ೮ ಕರ್ಜಗಿ, ೯ ಹಾನಗಲ್ಲ, ೧೦ ರಾಣೇಬೆನ್ನೂರ, ೧೧ ಕೋಡ ಎಂಬ ಹನ್ನೊಂದು ತಾಲೂಕುಗಳೂ, ೧ ನರಗುಂದ, ೨ ಮುಂಡರಗಿ ಹೀಗೆ ಎರಡು ಪೇಠಾಗಳೂ ಉಂಟು.

**ಭಾಷೆ, ಉದ್ಯೋಗ:—** ಈ ಜಿಲ್ಹೆಯ ಮುಖ್ಯ ಭಾಷೆ ಕನ್ನಡ. ಒಕ್ಕಲತನ, ನೇಕಾರಿಗಳೇ ಮುಖ್ಯ ಉದ್ಯೋಗಗಳು.

**ಮುಖ್ಯ ಊರುಗಳ ವರ್ಣನ:—** ಈ ಜಿಲ್ಹೆಯ ಮುಖ್ಯ ಸ್ಥಳ **ಧಾರವಾಡ**ವು. ಇದು ವಿದ್ವೆಯಲ್ಲಿ ಮುಂದುವರಿದಿದೆ. **ಹುಬ್ಬಳ್ಳಿ**ಯು ಕರ್ನಾಟಕದಲ್ಲಿ ಎಲ್ಲ ವ್ಯಾಪಾರಕ್ಕೆ ೧ನೆಯ ನಂಬರು ಬಂದಿದೆ. ಇಲ್ಲಿ ಜನ ದಟ್ಟಣೆ ಬಹಳ. ಇಲ್ಲಿ ನೂಲು ನೇಯುವ ಗಿರಣಿಗಳುಂಟು. ಮತ್ತು ರೇಲ್ವೆ (ಉಗಿಬಂಡಿ ತಯಾರಿಸುವ ಕಾರಖಾನೆ) ವರ್ಕಶಾಪ ಉಂಟು. ಇಲ್ಲಿ ಶ್ರೀಜಗದ್ಗುರು ಮೂರುಸಾವಿರ ಮಠವೂ, ಶ್ರೀಸಿದ್ಧಾರೂಢರ ಮಠವೂ ಪ್ರಸಿದ್ಧವಿವೆ. ಮತ್ತು ನರಗುಂದ, ಹಾವೇರಿ, ಬ್ಯಾಡಗಿ ರಾಣಿಬೆನ್ನೂರಗಳಲ್ಲಿ ತಕ್ಕಮಟ್ಟಿಗೆ ವ್ಯಾಪಾರ ನಡೆಯುವದು. **ಬ್ಯಾಡಗಿ**ಯಲ್ಲಿ ಮೆಣಸಿನಕಾಯಿ ವ್ಯಾಪಾರ ಹೆಚ್ಚು. **ಗದಗ, ಬೆಟಗೇರಿ**ಯಲ್ಲಿ ಸೀರಿಗಳಾಗುತ್ತವೆ. **ನರಗುಂದ** ಇದು ಭಾವೆ ಮನೆತನದ ಸಂಸ್ಥಾನವಿತ್ತು. ೧ ಶಿರಹಟ್ಟಿ, ೨ ಲಕ್ಷ್ಮೇಶ್ವರ, ೩ ಕುಂದಗೋಳ ಇವು ಕ್ರಮವಾಗಿ, ೧ ಸಾಂಗಲಿ, ೨ ಮಿರಜಿ, ೩ ಜಮಖಂಡಿ ಜಹಾಗೀರುಗಳಿಗೆ ಸೇರಿರುತ್ತವೆ. **ಯಮನೂರು** ಪೀರನ ದೊಡ್ಡ ಉರುಸು ಆಗುವದು. **ಗಜೇಂದ್ರಗಡ** ಘೋಸಲೆ ಮನೆತನದ ಸಂಸ್ಥಾನವು. ಉಪ್ಪಿನ ಬೆಟಗೇರಿ, ಮುಳಗುಂದಗಳು ದೊಡ್ಡ ಊರುಗಳು.

**ಸವಣೂರ ಸಂಸ್ಥಾನ**:-ಧಾರವಾಡ ಜಿಲ್ಹೆಯ ಪೂರ್ವಕ್ಕಿದೆ. ಇಲ್ಲಿಯ ಸಂಸ್ಥಾನಿಕನು ನವಾಬನೆಂಬ ಪಠಾಣ ಜಾತಿಯ ಮುಸಲ್ಮಾನನಿರುತ್ತಾನೆ. ಇವನು ಮೊದಲು ಪೇಶ್ವೆಯರ ಕಾಲಕ್ಕೆ ಅವರ ಮಾಂಡಲಿಕನಿದ್ದನು. ಧಾರವಾಡ ಕಲೆಕ್ಟರನೇ ಈ ಸಂಸ್ಥಾನದ ಪೊಲಿಟಿಕಲ್ ಏಜಂಟನು. ಇವನಿಗೆ ಈ ನವಾಬನು ಅಂಕಿತನಾಗಿರುವನು.

## ಕಾರವಾರ ಜಿಲ್ಹೆ

**ಮೇರೆಗಳು**:— ಉತ್ತರಕ್ಕೆ ಗೋವೆ ಪ್ರಾಂತ, ಬೆಳಗಾಂವಿ ಜಿಲ್ಹೆಗಳು; ಪೂರ್ವಕ್ಕೆ ಧಾರವಾಡ ಜಿಲ್ಹೆ ಮತ್ತು ಮೈಸೂರ ಸಂಸ್ಥಾನಗಳು; ಪಶ್ಚಿಮಕ್ಕೆ ಅರಬಿ ಸಮುದ್ರ.

ಈ ಜಿಲ್ಹೆಯನ್ನು ಮದ್ರಾಸ ಸರಕಾರದವರು ಸನ್ ೧೮೬೧ನೆಯ ಇಸ್ವಿಯಲ್ಲಿ ಮುಂಬಯಿ ಸರಕಾರಕ್ಕೆ ಕೊಟ್ಟರು. ಇದರಲ್ಲಿ ೧ ಕಾರವಾರ, ೨ ಅಂಕೋಲಾ, ೩ ಕುಮಠಾ, ೪ ಹೊನ್ನಾವರ, ೫ ಸಿದ್ದಾಪುರ, ೬ ಸಿರಸಿ, ೭ ಎಲ್ಲಾಪುರ, ೮ ಹಳಿಯಾಳ, ಎಂಬ ಎಂಟು ತಾಲೂಕುಗಳು ಇರುವವಲ್ಲದೆ ೧ ಭಟಕಳ, ೨ ಮುಂಡಗೋಡ, ೩ ಸುಫೆ ಎಂಬ ಮೂರು ಪೇಠಾಗಳುಂಟು.

**ಭೂಮಿಯ ಸ್ವರೂಪ**:— ಘಟ್ಟದ ಮೇಲೂ ಕೆಳಗೂ ಇರುವ ನಿಬಿಡವಾದ ಅರಣ್ಯವು ಆಶ್ಚರ್ಯಕಾರಕವಾದದ್ದು. ಈ ಜಿಲ್ಹೆಯಲ್ಲಿ ೯ ಸಣ್ಣ ನದಿಗಳುಂಟು. ಅವುಗಳಲ್ಲಿ ಶರಾವತಿ ನದಿಯು ಗುಡ್ಡದ ಮೇಲಿಂದ ೮೫೦ ಫೂಟು ಎತ್ತರದಿಂದ ಬೀಳುವ ಕಾರಣ ನಾಲ್ಕು ರಮಣೀಯವಾದ ತಡಸಲುಗಳಾಗಿವೆ. ಇಂಥ ದೊಡ್ಡ ತಡಸಲುಗಳು ಎಲ್ಲಿಯೂ ಇಲ್ಲ. ಈ ಜಿಲ್ಹೆಯಲ್ಲಿ ಮುಖ್ಯ ಭಾಷೆ ಕನ್ನಡ. ಆದರೆ ಕೊಂಕಣ ಭಾಷೆಯು ಸಮುದ್ರ ಧಡದ ಪ್ರದೇಶಗಳಲ್ಲಿ ಉಂಟು. ಒಕ್ಕಲತನ, ಮೀನ ಹಿಡಿಯುವದು, ಕೈಗಾರಿಕೆ ಇವು ಮುಖ್ಯ ಉದ್ಯೋಗಗಳು. ಶ್ರೀಗಂಧದ ಕಟ್ಟಿಗೆಯ ಸಾಮಾನುಗಳು ಪ್ರಸಿದ್ಧ ಉಂಟು.

**ಹುಟ್ಟುವಳಿ**:— ಘಟ್ಟದ ಕೆಳಗೆ ಅಕ್ಕಿ, ಗೋದಿ, ಕಡಲೆ, ತೆಂಗು, ಅಡಿಕೆ, ಯಾಲಕ್ಕಿ, ಮೆಣಸುಗಳು ಬೆಳೆಯುತ್ತವೆ. ಸಹ್ಯಾದ್ರಿಯ ದಟ್ಟಾದ ಅಡವಿಯಲ್ಲಿ ತೇಗು, ಮತ್ತಿ, ಹೊನ್ನಿ, ಶ್ರೀಗಂಧ ಮುಂತಾದ ಮರಗಳು

ಬೆಳೆಯುವದರಿಂದ ಇವುಗಳ ವ್ಯಾಪಾರವು ಹಳಿಯಾಳ ಎಲ್ಲಾಪೂರಗಳಲ್ಲಿ ಸರಕಾರಿ ಅಧಿಕಾರಿಗಳ ಮುಖಾಂತರ ನಡೆಯತ್ತದೆ. ಈ ಅಡವಿಯಲ್ಲಿ ಅರಳಿಕಾಯಿ, ಶೀಗಿಕಾಯಿಗಳೂ ಬೆಳೆಯುತ್ತವೆ.

**ಮುಖ್ಯ ಊರುಗಳ ವರ್ಣನೆ:— ಕಾರವಾರ, ಕುಮಟಾ, ಹೊನ್ನಾವರ** ಬಂದರಗಳು ವ್ಯಾಪಾರಕ್ಕೆ ಪ್ರಸಿದ್ಧ. ಕಾರವಾರವು ಮಳೆಗಾಲದಲ್ಲಿ ಹತ್ತು ಹನ್ನೆರಡು ಹಡಗುಗಳು ನಿಲ್ಲಲು ಪ್ರಶಸ್ತವಾದ ಬಂದರವು. ಈ ಭಾಗದಲ್ಲಿ ಸಹ್ಯಾದ್ರಿಪರ್ವತವು ಅಡ್ಡವಾದ ಮೂಲಕ ರೇಲ್ವೆ ಹಾಕಲು ಹೆಚ್ಚು ಖರ್ಚು ಬರಬಹುದೆಂದು ಬಿಟ್ಟಿರುವರು. ಸಿರಸಿಯು ದೊಡ್ಡ ವ್ಯಾಪಾರ ಸ್ಥಳ. ಇಲ್ಲಿ ಅಡಿಕೆ, ಮೆಣಸು, ಯಾಲಕ್ಕಿ ವ್ಯಾಪಾರ ಹೆಚ್ಚು. **ಬನವಾಸಿ, ಸ್ವಾದಿ, ಕೆಳದಿ**ಗಳು ಇವು ಕಿತ್ತೂರ ವೀರಶೈವರ ಹಳೇ ರಾಜಧಾನಿಗಳು. ಅಂಕೋಲಾದಲ್ಲಿ ಮಾವಿನ ಹಣ್ಣಿನ ರಸವನ್ನು ತೆಗೆದು ಡಬ್ಬಿಗಳಲ್ಲಿ ತುಂಬಿ ಪರಸ್ಥಳಕ್ಕೆ ಕಳಿಸುವ ಕಾರಖಾನೆ ಅದೆ. **ಗೋಕರ್ಣ, ಉಳವಿಗಳು** ಕ್ಷೇತ್ರಗಳು. **ಸಾಣೇಕಟ್ಟೆ** ಎಂಬಲ್ಲಿ **ಉಪ್ಪು** ಮಾಡುವ ಕಾರಖಾನೆ ಉಂಟು. **ಬಟಕಳವು** ಬಂದರವೂ ಪೇಠಾವೂ ಉಂಟು. ಮೈಸೂರ ಸಂಸ್ಥಾನದಲ್ಲಿ ಬಂದರವಿಲ್ಲದ್ದರಿಂದ ಇದನ್ನು ಸರಕಾರದವರಿಂದ ಕೊಂಡುಕೊಂಡಿದ್ದಾರೆ. ಗೆರಸೊಪ್ಪೆಯ ಧಬಧಬೆಯಿಂದ ಪ್ರಸಿದ್ಧವಾದ ನೂಲಿನ ಗಿರಣಿಯು ನಡೆದಿದೆ.

**ಕೊಲ್ಹಾಪೂರ ಸಂಸ್ಥಾನ:—** ಈ ಸಂಸ್ಥಾನವು ಬೆಳಗಾಂವಿಯ ವಾಯವ್ಯದಲ್ಲಿ ವಾರಣಾ ನದಿಯ ದಕ್ಷಿಣಕ್ಕಿರುತ್ತದೆ. ಇದರ ಪಶ್ಚಿಮಕ್ಕೆ ಸಹ್ಯಾದ್ರಿ ಪರ್ವತವುಂಟು. ಅದರಾಚೆಯಲ್ಲಿ ರತ್ನಾಗಿರಿ ಜಿಲ್ಹೆ, ಸಾವಂತ-ವಾಡಿ ಸಂಸ್ಥಾನಗಳುಂಟು. ಈ ಪ್ರಾಂತದಲ್ಲಿ ಮಳೆ ಬಹಳ ಆಗುತ್ತದೆ. **ಪಂಚಗಂಗಾ** ಮುಂತಾದ ಹೊಳೆಗಳ ತೀರದ ಮೇಲೆ ಪ್ರದೇಶವು ಬೆಳೆಯುಳ್ಳದಿದ್ದು, ಎಲ್ಲ ತರದ ಧಾನ್ಯಗಳು ಬೆಳೆಯುತ್ತವೆ. ಒಕ್ಕಲತನ, ಅರವಿ ನೇಯುವದು, ಮಣ್ಣಿನ ಪಾತ್ರೆ ಮಾಡುವದು ಇಲ್ಲಿಯ ಮುಖ್ಯ ಉದ್ಯೋಗಗಳು. ಈ ಸಂಸ್ಥಾನದಲ್ಲಿ ಸ್ವಲ್ಪ ಕಬ್ಬಿಣ ಹುಟ್ಟುವದು. ಇಲ್ಲಿ ಕನ್ನಡ, ಮರಾಠಿ ಭಾಷೆಗಳನ್ನಾಡುವರು. ಇಲ್ಲಿಯ ಅರಸನಿಗೆ **ಛತ್ರಪತಿ** ಪದವಿ ಉಂಟು. ಇವನು **ಶಿವಾಜಿ** ಮನೆತನದವನು. ಆದರೆ ಸಾತಾರೆ ಅರಸು